# ಶೂದ್ರ

ಬೆಲೆ: 2-50 ರೂ.



ಈ ಸಂಚಿಕೆಯಲ್ಲಿ :

ರಾಮಚಂದ್ರದೇವ

ಚೆನ್ನಣ್ಣ ವಾಲೀಕಾರ

ಎಲ್ಸಿ ನಾಗರಾಜು

ಎಸ್. ಎಸ್. ಹಿರೇಮಠ

ರಾಜಶೇಖರ ಹನುಮಲಿ

ವೀಚಿ

ಪಿ. ಆರ್. ತಿಪ್ಪೇಸ್ವಾಮಿ

ಮೀರಾ ಚಕ್ರವರ್ತಿ

ಎ. ಆರ್. ನಾಗಭೂಷಣ

ಸಂಧ್ಯಾರೆಡ್ಡಿ

ಶಿವರಾಮ ಪೈಲೂರು

ಸುದ್ದಿಯ ಗುದ್ದಾಟ

ಕನಸಿಗೊಂದು ಕಣ್ಣು

'ಮುಕ್ತ' ಚರ್ಚೆಗಾಗಿ 'ಶೂದ್ರ' ತಿಂಗಳ ಪತ್ರಿಕೆ

ಸಂಚಿಕೆ : 12 ಅಕ್ಟೋಬರ್ 1986 ಸಂಪುಟ : 12

ಸಹಾಯಕ ಸಂಪಾದಕರು : ನಿರ್ಮಲಾರೆಡ್ಡಿ—ಆನಂದ ಮೂರ್ತಿ—ಮಹೇಶ್

ಶೂದ್ರ ಬರದಿದ್ದರೆ ಪತ್ರ ಬರೆಯಿರಿ, ಚಂದಾ ಕಳಿಸಿ. ಲೇಖನ ಕಳಿಸುವಾಗ 15 ಪೈಸೆಯ ರಿಪ್ಲೈ ಕಾರ್ಡಿಡಿ. ಚೆಕ್ ಮೂಲಕ ಚಂದಾಕಳಿಸುವವರು 2ರೂ. ಹೆಚ್ಚುವರಿ ತುಂಬಿ.

ವಾರ್ಷಿಕ ಚಂದಾ : 25 ರೂ. ಆಜೀವ ಚಂದ : 250 ರೂ. (ಐದು ಕಂತುಗಳಲ್ಲಿ)

ಶೂದ್ರ ಶ್ರೀನಿವಾಸ್, ಸುದ್ದುಗುಂಟೇಪಾಳ್ಯ, ಡಿ. ಆರ್. ಕಾಲೇಜುಅಂಚೆ,
ಬೆಂಗಳೂರು–560029

ನವೆಂಬರ್ 1986ರ ಸಂಚಿಕೆ ಸ್ವಲ್ಪ ತಡವಾಗಿ ಬರುವುದು. ಸಹಕರಿಸಬೇಕಾಗಿ ವಿನಂತಿ. 'ಲಂಕೇಶ್' ರವರ ಸಾಹಿತ್ಯ ಮತ್ತು ಚಟುವಟಿಕೆ ಕುರಿತು ನಡೆಸಿದ ವಿಚಾರ ಸಂಕಿರಣದ ಒಟ್ಟು ಪ್ರಬಂಧಗಳನ್ನು ಹಾಗೂ ಭಾಷಣಗಳನ್ನು ಡಿಸೆಂಬರ್ ತಿಂಗಳಿಗೆ ಬದಲಾಗಿ ಜನವರಿಯಲ್ಲಿ ಪುಸ್ತಕ ರೂಪದಲ್ಲಿ ತರಲಾಗುವುದು. ಅದೇ ಸಮಯಕ್ಕೆ ನಮ್ಮಲ್ಲಿಯ ಶ್ರೇಷ್ಠ ಕಥೆಗಾರರಾದ **ಯಶವಂತ ಚಿತ್ತಾಲ** ಹಾಗೂ **ಪೂರ್ಣಚಂದ್ರ ತೇಜಸ್ವಿ**ಯವರ ಸಾಹಿತ್ಯ ಕುರಿತು ವಿಚಾರ ಸಂಕಿರಣ ನಡೆಸಲಾಗುವುದು.

# ಅರಿವು

—ರಾಮಚಂದ್ರದೇವ

ಚಂದ್ರಗುತ್ತಿಯಲ್ಲಿ ಈ ವರ್ಷ ಮಾರ್ಚ್ ತಿಂಗಳಲ್ಲಿ ನಡೆದ ಬತ್ತಲೆ ಸೇವೆ ಬಗ್ಗೆ ಬಂದ ಮುಖ್ಯ ಪ್ರತಿಭಟನೆ ದಲಿತ ಸಂಘರ್ಷ ಸಮಿತಿಯವರದ್ದು. ಅವರು ಬತ್ತಲಾಗದಂತೆ ಬತ್ತಲೆಸೇವೆಯ ಭಕ್ತರ ಮನ ಒಲಿಸಲು ಪ್ರಯತ್ನಿಸಿದರು. ಆದರೆ ಬತ್ತಲೆ ಸೇವೆಯ ಭಕ್ತರು ಮಾತ್ರ ಇವರನ್ನೇ ಬತ್ತಲೆ ಮಾಡುವ ಪಣ ತೊಟ್ಟಿದ್ದರು. ಅವರು ಒಬ್ಬ ಪೊಲೀಸ್ ಇನ್‌ಸ್ಪೆಕ್ಟರು ಮತ್ತು ಇನ್ನೊಬ್ಬರು ಮಹಿಳಾ ಪೋಲೀಸ್ ಇನ್‌ಸ್ಪೆಕ್ಟರುಗಳನ್ನು ಬತ್ತಲೆ ಮೆರವಣಿಗೆ ಸಮೇತ ಮಾಡಿದರು. ಇವರ ಕೈಗೆ ಸಿಕ್ಕಲಿದ್ದ ಇನ್ನು ಅನೇಕರು ಪೋಲಿಸು ಜೀಪುಗಳಲ್ಲಿ ಅಡಗಿ ಕೂತು ಪಾರಾಗಬೇಕಾಯಿತು.

ಬತ್ತಲೆ ಸೇವೆಯ ಭಕ್ತರ ಮನಸ್ಸನ್ನು ಒಲಿಸಲು ಪ್ರಯತ್ನಿಸಿದ, ಅದನ್ನು ಅವರು ಪ್ರತಿರೋಧಿಸಿ ಅಕ್ಷರಸ್ಥರನ್ನೇ ಬತ್ತಲಾಗಿಸಿದ ಈ ಘಟನೆ ನಮ್ಮ ಕಾಲದ ಕೆಲವು ಮುಖ್ಯ ಲಡಾಯಿಗಳನ್ನು ಬೆಳಕಿಸುತ್ತದೆ, ಪ್ರಾಕೃತ-ನಾಗರಿಕ, ಅನಕ್ಷರತೆ-ಅಕ್ಷರತೆ, ಹಳ್ಳಿ-ಪೇಟೆ, ಬತ್ತಲೆ-ಬಟ್ಟೆ, ಆಸ್ತಿಕರು-ನಾಸ್ತಿಕರು, ಸ್ಥಾಯಿ-ಬದಲಾವಣೆ ಮೊದಲಾದ ನಮ್ಮ ಕಾಲದ ದೊಡ್ಡ ವೈರುಧ್ಯಗಳ ಲಡಾಯಿ ಇದು.

ಚಂದ್ರಗುತ್ತಿಯ ಭಕ್ತರು ಅಷ್ಟೊಂದು ಗಲಾಟೆ ಮಾಡುತ್ತಿದ್ದಾಗ, ಬಟ್ಟೆ ಕಳಚುವಂತೆ ನಾಗರಿಕರನ್ನು ಪ್ರಚೋದಿಸುತ್ತಿದ್ದಾಗ. ಪೊಲೀಸರು ಲಾಠಿ ಚಾರ್ಜಿಗಾಗಲೀ ಅಶ್ರುವಾಯು ಪ್ರಯೋಗಕ್ಕಾಗಲೀ ಅಣಿಯಾಗಲಿಲ್ಲ ಎಂದು ಈ ಸಂದರ್ಭದಲ್ಲಿ ಅನೇಕ ಪತ್ರಿಕೆಗಳು ದೂರಿದವು. ಸಾಕಷ್ಟು ಪೊಲೀಸರು ಸಮೇತ ಇರಲಿಲ್ಲ ಎಂದೂ ಕೆಲವು ಪತ್ರಿಕೆಗಳು ವರದಿಸಿದವು.

ನನಗೆ ತಿಳಿದು ಬಂದಂತೆ ಪೊಲೀಸರ ನಿಷ್ಕ್ರಿಯತೆಗೆ ಕಾರಣ ಇಂತು ಪರಿಯಿದೆ:

ದಲಿತ ಸಂಘರ್ಷ ಸಮಿತಿಯವರು ಬತ್ತಲೆ ಸೇವೆಯನ್ನು ವಿರೋಧಿಸಿ ಚಳವಳಿ ಮಾಡುವರು ಎಂದಾಗ ಗಲಾಟೆ ಆಗುವ ಸಾಧ್ಯತೆ ಉಂಟು ಎಂದು ಸಕಲರಿಗೆ

---

ರಾಮಚಂದ್ರದೇವ, ಕಲ್ಮಡ್ಕ ಅಂಚೆ, ದಕ್ಷಿಣ ಕನ್ನಡ ಜಿಲ್ಲೆ-574 257

ತಿಳಿದಿತ್ತು. ಗಲಾಟೆ ಆಗಲಿ, ಆದಾಗ ಪೋಲೀಸರು ಲಾಥಿ ಚಾರ್ಜು ಮಾಡಲಿ ಎಂದು ವಿರೋಧ ಪಕ್ಷದವರು ಕಾಯುತ್ತಿದ್ದರು. ಹಾಗೆ ಮಾಡಿದ್ದರೆ ದೈವಭಕ್ತರ ಮೇಲೆ ಹಿಂಸಾಚಾರಕ್ಕೆ ತೊಡಗಿದ ಈ ಸರಕಾರ ರಾಜಿನಾಮೆ ಕೊಡಬೇಕೆಂದು ವಿರೋಧ ಪಕ್ಷದವರು ಚಳವಳಿ ಹೂಡಲಿದ್ದರು. ದೈವಭಕ್ತರ ಮೇಲೆ ಲಾಥಿ ಚಾರ್ಜು ಮಾಡಿದರೆ ಅದು ರೈತರ ಮೇಲೆ ಗೋಲಿಬಾರು ಮಾಡಿದ್ದಕ್ಕಿಂತಲೂ ಹೆಚ್ಚು ಮಟ್ಟದಲ್ಲಿ ಜನರ ಉದ್ವೇಗವನ್ನು ಕೆರಳಿಸುತ್ತಿತ್ತು. ಸರಕಾರಕ್ಕೆ ಇದು ತಿಳಿದಿತ್ತು. ಇಂತು ಕಾರಣವಾಗಿ ಏನೇ ಆದರೂ ಲಾಥಿ ಚಾರ್ಜು ಇತ್ಯಾದಿ ಮಾಡಬಾರದೆಂದು ಅದು ಪೋಲೀಸರಿಗೆ ತಿಳಿಸಿತ್ತು.

ಬತ್ತಲೆ ಸೇವೆಯನ್ನು ಇಂತು ಪರಿಯಾಗಿ ರಾಜಕಾರಣಿಗಳು ಉಪಯೋಗಿಸಲಿದ್ದರೆಂಬ ಈ ಸಂಗತಿ ಬತ್ತಲೆ ಸೇವೆ ಸೃಜನಶೀಲ, ಅದು ಜನರ ಉತ್ಸಾಹದ ಪ್ರತೀಕ ಎಂಬ ರೀತಿಯಲ್ಲಿ ನಡೆದ ಕೆಲವು ಸ್ನೇಹಿತರ ಚಿಂತನೆಗೆ ಉತ್ತರಿಸುವುವು : ಬತ್ತಲೆಸೇವೆ ಮಾಡುವವರು ಈ ಸಮಾಜದ ಬಟ್ಟೆ ಸಮೇತ ಬೇಡ ಎಂದು ಹೇಳಿದರೂ ಕೂಡಾ ಸಮಾಜ ಮಾತ್ರ ಅವರನ್ನು ಬಿಡದು. ವಿರೋಧಪಕ್ಷ ಅವರನ್ನು ಬಳಸಿಕೊಳ್ಳುವುದು —ಜಿಬಿಲಿಯಾಗಿ.

ನಾನು ಕೇಳಿದ ಇನ್ನೊಂದು ಸಂಗತಿ ಎಂದರೆ. ಈ ಪ್ರಕರಣದಲ್ಲಿ ಜೋಗಿತಿಯರಿಗಿರುವ ಪ್ರಾಮುಖ್ಯತೆ. ಬತ್ತಲೆ ಸೇವೆಯ ಹರಕೆ ಹೊರುವಂತೆ ಪುಣ್ಯಪಾಪಗಳ ಕಿಂಡಿಯನ್ನೊಡ್ಡಿ ಅಮಾಯಕ ಹೆಣ್ಣು ಮಕ್ಕಳನ್ನು ಅವರು ಪ್ರಲೋಭಿಸುವರು ಇಲ್ಲ ಹೆದರಿಸುವರು ಎಂದು ಕೇಳಿದೆ. ಈ ಜೋಗಿತಿಯರು ಅನೇಕ ಸಲ ಸೂಳೆಗೇರಿಗಳ ಏಜೆಂಟರು.

ಆದ್ದರಿಂದಲೇ ಬತ್ತಲೆಸೇವೆ ಈಗ ಅರ್ಥಪೂರ್ಣ ಸಾಮುದಾಯಿಕ ನಂಬಿಕೆ ಅಥವಾ ಆಚರಣೆ ಅಲ್ಲ. ಜೋಗಿತಿಯರ, ಧರ್ಮದ ಭಯದಲ್ಲಿ ನಡೆಯುವ, ಅಥವಾ ಕಳೆದ ವರ್ಷ ನಡೆದಿದೆ.ಹಿರಿಯರು ನಡೆಸಿದ್ದಾರೆ ಎಂಬ ಕಾರಣಕ್ಕೆ ಈ ವರ್ಷ ನಡೆಯುವ, ನಡೆಸುತ್ತಿರುವವರು ಇನ್ನೊಬ್ಬರ ಕೈಯ ಜಿಬಿಲಿಯಾಗಿರುವ ಈ ಆಚರಣೆ ತಿಥಿ, ಬೊಜ್ಜ, ಸತ್ಯನಾರಾಯಣ ಪೂಜೆ ಮೊದಲಾದ ಉಳಿದೆಲ್ಲ ಸಾಮುದಾಯಿಕ ನಂಬಿಕೆ—ಆಚರಣೆಗಳಂತೆ ಕೊಳೆತ ಸಂಸ್ಕೃತಿಯ ಫಲವಾಗಿದೆ.

ಇದು ಧಾರ್ಮಿಕತೆ ಅಲ್ಲ. ಧಾರ್ಮಿಕತೆ ವೈಯಕ್ತಿಕವಾಗಿ ಮಾತ್ರ ಸಾಧ್ಯ. ಈಗ ಸಾಮುದಾಯಿಕವಾಗಿ ಧಾರ್ಮಿಕತೆ ಉಳಿಯಲಾರದಷ್ಟು ನಮ್ಮ ಸಮಾಜ ಛಿದ್ರಿಸಿಕೊಂಡಿದೆ.

ಇಲ್ಲಿ ಇನ್ನೊಂದು ವಿಷಯ ನಮೂದಿಸಬೇಕು : ಉಳಿದ ಜಾತಿಯ ಅಕ್ಷರಸ್ಥ ಶ್ರೀಮಂತರಲ್ಲಿ ಸಮೇತ ಬತ್ತಲೆಸೇವೆಯ ಈ ಆಚರಣೆ ಇವೆಯಂತೆ. ಆದರೆ ಅವರು ಆ ದಿನ ರೇಷ್ಮೆ ಸೀರೆಯುಟ್ಟು, ಎದೆ-ಸೊಂಟಗಳಿಗೆ ಸಾಂಕೇತಿಕವಾಗಿ ಮಾವಿನ ಸೊಪ್ಪು ಕಟ್ಟಿಕೊಂಡು, ಮನೆಯೊಳಗೆ ದೇವರ ಕೋಣೆಯಲ್ಲಿ ದೇವರಿಗೆ ನಮಸ್ಕಾರ ಮಾಡುವುದರ ಮೂಲಕ ಇದನ್ನು ಆಚರಿಸುತ್ತಾರೆ.

2

ಸ್ವಂತಿಕೆಯ ಅರಿವಿನ ಪ್ರಥಮ ಹಂತ ಬಟ್ಟೆ ತೊಡುವುದು. ಅದರ ಬೆಳವಣಿಗೆ ಹಂತ ಅಕ್ಷರಜ್ಞಾನ. ಅಕ್ಷರಜ್ಞಾನ ಇಂದಿನ ವಿಸ್ಮಯಗಳನ್ನು ತಿಳಿಯಲು ಬೇಕಾದ ಪ್ರಾಥಮಿಕ ಅವಶ್ಯಕತೆ. ಬತ್ತಲೆಸೇವೆ ಮಾಡಿದವರು ಈ ಪ್ರಾಥಮಿಕ ಅರಿವಿಗಿಂತ ಹಿಂದಿನ ಸ್ಥಿತಿಯಲ್ಲಿರುವವರು.

ಜೈನಧರ್ಮದಲ್ಲಿ ದಿಗಂಬರರು ಇನ್ನೊಂದು ಪರಿಯಲ್ಲಿ ಬತ್ತಲಾಗುವುದನ್ನು ಕಾಣುವೆವು. ಅವರು ಬತ್ತಲಾಗುವುದು ಅರಿವಿನ ಅತ್ಯುನ್ನತ ಸ್ಥಿತಿಯ ಪರಿಣಾಮವಾಗಿ. ಇದು ನಾಗರಿಕತೆಯ, ಶ್ರೀಮಂತಿಕೆಯ, ವೈಯಕ್ತಿಕ ಸಂಕಟದ ಮತ್ತು ಬೇರೆ ಸಕಲ ಜೀವನ ಕ್ರಮಗಳ ಅರಿವಿನ ನಂತರ, ಸಂಪೂರ್ಣ ಪರಿತ್ಯಾಜ್ಯದ ಫಲವಾಗಿ,ಬಂದ ಸ್ಥಿತಿ. ಆದರೆ ಬತ್ತಲೆ ಸೇವೆ ಮಾಡಿದವರ ಬತ್ತಲೆತನ ಅರಿವಿನ ನಂತರದ ಸ್ಥಿತಿಯಲ್ಲ. ಅದು ಅರಿವು-ಪೂರ್ವದ ಸ್ಥಿತಿ.

ಅರಿವಿನ ಪೂರ್ವದಲ್ಲಿ ಬತ್ತಲಾಗುವುದು ಮತ್ತು ಅರಿವಿನ ಅಂತಿಮ ಹಂತವಾಗಿ ಆತ್ಮಜ್ಞಾನ ಒಂದರ ಹೊರತು ಬೇರೆ ಬೇಡವೆಂದು ಸಕಲಗಳ ಪರ್‍ಯತಜಿಸಿ ಬತ್ತಲಾಗುವುದು ಪರಸ್ಪರ ವಿರೋಧವಾದ ಸಂಗತಿಗಳು. ಪ್ರಜ್ಞೆಯ ವಿವಿಧ ಹಂತಗಳೆಂದು ಸಮೇತ ಇವನ್ನು ಕರೆಯಬಹುದು.

ಅರಿವಿನ ವಿವಿಧ ಹಂತಗಳು ವಸ್ತುವಾಗುಳ್ಳ ಕತೆಯೊಂದು ಕನ್ನಡದಲ್ಲಿದೆ. ಅದೇ ಸುಕುಮಾರ ಸ್ವಾಮಿಗಳ ಕತೆ-ವಡ್ಡಾರಾಧನೆಯ ಮೊದಲನೆಯ ಕತೆ.

ಸುಕುಮಾರ ಸ್ವಾಮಿಯ ಕತೆಯ ಸುರುವಿನಲ್ಲಿ ಅಕ್ಷರ ಸಂಸ್ಕೃತಿಯ ಪರಿಚಯ ಪಡೆಯದಿರುವ ಅಗ್ನಿಭೂತಿ ಮತ್ತು ವಾಯುಭೂತಿಯ ಪ್ರಸ್ತಾಪ ಬರುತ್ತದೆ. ಮಂತ್ರಿಯಾಗಿದ್ದ ಇವರ ತಂದೆ ಸೋಮಶರ್ಮ ಸತ್ತಾಗ ಅರಸ ಇವರನ್ನು ಕರೆಸಿ ವಿಚಾರಿಸಿದರೆ- 'ಇವರ್ ಮೂರ್ಖರೇನು ಮೋರ್ದುಗಳನಱಿಯರ್', 'ಸಪ್ತವ್ಯಸನಾಭಿಭೂತರ್' ಎನ್ನುವುದು ತಿಳಿಯುತ್ತದೆ. ಮುಂದೆ ಸೂರ್ಯಮಿತ್ರನ ಹತ್ತಿರ ಇವರು ಪಡೆಯುವುದು ಅಕ್ಷರ ಸಂಸ್ಕೃತಿಯಿಂದ ಪಡೆಯಬಹುದಾದ ಜ್ಞಾನವನ್ನು : ಈಗ ಇವರು ಸೂರ್ಯಮಿತ್ರನ

'ಪ್ರಸಾದದಿಂದೆಲ್ಲಾ ಶಾಸ್ತ್ರಮಂ ಕಲ್ತು ಪಂಡಿತ' ರಾಗುತ್ತಾರೆ. ಈ ಅಕ್ಷರ ಸಂಸ್ಕೃತಿಯ ಪರಿಣಾಮವಾಗಿ ಪಡೆದ ಪಾಂಡಿತ್ಯದಿಂದ ಅವರಿಗೆ ಅರಮನೆಯಲ್ಲಿ 'ತಂದೆಯ ಮಂತ್ರಿ ಪದಮಂ ಬಾಳ್ವೆಮಂ' ಸಿಗುತ್ತದೆ. ಅವರಿಗೆ ಪಾಠ ಹೇಳಿದ ಸೂರ್ಯಮಿತ್ರ, ವಾಯು ಭೂತಿ, ಅಗ್ನಿಭೂತಿ, ಅವರ ತಾಯಿ, ಅರಸ, ಇಂತಿವರು ಸಕಲರು ಈ ಘಟ್ಟದವರೆಗೆ ಅಕ್ಷರ ಸಂಸ್ಕೃತಿ ಮತ್ತು ಅದು ಕೊಡುವ ಜ್ಞಾನವನ್ನು ಗೌರವಿಸುವವರು. ಅದು ಅಂತಿಮ ವೆಂದು ತಿಳಿದವರು.

ಅಕ್ಷರ ಸಂಸ್ಕೃತಿ ಮತ್ತು ಅದರಿಂದ ಬಂದ ಅರಿವಿನ ಮಿತಿ ಸೂರ್ಯಮಿತ್ರನ ಅನು ಭವಕ್ಕೆ ಬರುವುದು ಮುಂದೆ ಆತ, ಉಂಗುರ ಕಳೆದುಕೊಂಡಾಗ. ತನ್ನ ಇದುವರೆಗಿನ ಜ್ಞಾನದ ಮಿತಿಯನ್ನರಿತ ಆತ ಜ್ಯೋತಿಶ್ಶಾಸ್ತ್ರ ವೇದ ಮೊದಲಾದವನ್ನು ಕಲಿಯಲು ಪ್ರಾರಂಭಿಸುವನು. ಅದು ಸಕಲ ಸಾಕಾಗದೆ ಆತ ಕೊನೆಗೆ ತಲುಪುವುದು ಆತ್ಮಜ್ಞಾನದ ಹಂತಕ್ಕೆ. ಅಕ್ಷರ ಸಂಸ್ಕೃತಿಯಿಂದ ಬಂದ ಅರಿವನ್ನು ದಾಟಿದ ಸ್ವ-ಅರಿವು ಇದು.

ವಾಯುಭೂತಿ ಸೂರ್ಯಮಿತ್ರನನ್ನು ಹೀಗಳೆದು ಮಾತಾಡಿದಾಗ ಸ್ವಂತದ ಅರಿ ವಿಲ್ಲದೆ ಮಾತಾಡುತ್ತಿದ್ದನು. ಮುಂದಿನ ಅವನ ಜೀವನ ಮಾತ್ರ ಅಕ್ಷರದಿಂದ ಬಂದ ಅರಿವಿನ ಮಿತಿಗಳನ್ನು ವಿವಿಧ ಮಟ್ಟದಲ್ಲಿ ಅರಿತುಕೊಳ್ಳುವುದರಲ್ಲಿದೆ. ಆತ ಮುಂದಿನ ಜನ್ಮದಲ್ಲಿ ವಿವಿಧ ಪ್ರಾಣಿಗಳಾಗಿ, ಹುಟ್ಟುಗುರುಡಿಯಾಗಿ, ನಾಗಶ್ರೀಯಾಗಿ, ಸುಕುಮಾರ ಸ್ವಾಮಿಯಾಗಿ ಪಡೆಯುವುದು ಅರಿವಿನ ವಿವಿಧ ಹಂತಗಳನ್ನು, ಹಾಗೂ ಅವುಗಳ ಮಿತಿಗಳನ್ನು. ವಾಯುಭೂತಿಯಾಗಿದ್ದಾಗ ಆತ ಸೂರ್ಯಮಿತ್ರನಿಂದ, ಓದಿನಿಂದ ಜ್ಞಾನ ಪಡೆದರೆ ನಾಗಶ್ರೀಯಾಗಿ ಪ್ರತ್ಯಕ್ಷ ಜೀವನದ ಬಗ್ಗೆ ನೋಡಿ ಅರಿವನ್ನು ಪಡೆಯುವನು. ಮುಂದೆ ಸುಕುಮಾರ ಸ್ವಾಮಿಯಾಗಿ ಆತ ಅರಿವು ಪಡೆಯುವುದು ಸಾವಿನ ಸಾಮಿಪ್ಯ ದಲ್ಲಿ. ಈ ಅರಿವು ಅತ್ಯುನ್ನತ ಆತ್ಮಜ್ಞಾನದಿಂದ ಹುಟ್ಟಿದ ಅರಿವು.

4

ಇಲ್ಲಿ ವಡ್ಡಾರಾಧನೆ ಬಗ್ಗೆ ಲಿಖಿಸುವುದು ಅಪ್ರಸ್ತುತವಾಗಲಾರದು. ವಡ್ಡಾ ರಾಧನೆ ನನ್ನನ್ನು ಹೊಸ ಮನಸ್ಸಿಗೆ ಒಯ್ದ ಕೃತಿ. ಇದರ ಲೇಖಕ ಶಿವಕೋಟ್ಯಾಚಾರ್ಯನ ಅನುಭವ ವಿಸ್ತಾರ, ಭಾಷೆಯ ಪ್ರಯೋಗಗಳು ಮನಸ್ಸನ್ನು ಹೊಸತಾಗಿ ಬೆಳಕಿಸುವ ನಮೂನೆಯವು. ಉದಾಹರಣೆಗೆ ಗಜಕುಮಾರನ ಕಥೆ ಎಂಬ ಕಥೆಯನ್ನು ಮನಂಬುಗುವ ಇದು ಗಜಕುಮಾರನೆಂಬ ಒಬ್ಬ ವ್ಯಕ್ತಿಯ ಬಗ್ಗೆ ಬರೆದ ಮೂರು ಪುಟಗಳ ಕತೆ. ಇದು ಆ ವ್ಯಕ್ತಿಯ ಪಾಡನ್ನು ತಿಳಿಸುವುದು. ಆದಕ್ಕೆ ಒತ್ತಿಕೊಂಡು ಇದು ಆ ದೇಶದ ಪಾಡನ್ನು, ಮತ್ತು ಅಪರಿಮಿತ ಅಧಿಕಾರ ಹೊಂದಿದ ನಿರಂಕುಶನ ನಾಡವರ ಪಾಡನ್ನು ತಿಳಿಸುವುದು. ಇಂತು ಈ ಲೇಖಕನ ಸಂವೇದನೆಯ ವಿಸ್ತಾರ ಬಹುಮೇಲುಮಟ್ಟದ್ದು.

ಅನುಭವಕ್ಕೆ ಹೊಂದಿಕೊಂಡಂತೆ ಆತನ ಭಾಷೆಯು ಅಂತೆ ಪರಿವಿಸ್ತಾರದ್ದು. ರಂ. ಶ್ರೀ ಮುಗಳಿಯವರು ಶಿವಕೋಟ್ಯಾಚಾರ್ಯನ ಗದ್ಯ ದೇಸಿ ಮತ್ತು ಮಾರ್ಗಗಳ ಸಮನ್ವಯ ಸಾಧಿಸಿದೆ ಅನ್ನುವರು. ಮಾತ್ರವಲ್ಲ, ಇಲ್ಲಿನ ದೀರ್ಘವಾಕ್ಯಗಳು ಕನ್ನಡ ಗದ್ಯದ ಹೊಸಲಯವನ್ನು ಕಾಣಿಸುವುವು. ಧ್ವನಿಯ ಏರಿಳಿತಗಳು, ಒಂದೇ ವಾಕ್ಯದಲ್ಲಿ ಬಳಕೆಯಾಗುವ ಲಯ ವೈವಿಧ್ಯಗಳು, ಬಾಹ್ಯವನ್ನು ಉದ್ದೇಶಿಸಿ ಆಡಿದ ಮಾತು ಆಂತರಿಕ ಸ್ವಗತವಾಗಿ, ಆಂತರಿಕ ಸ್ವಗತ ಬಾಹ್ಯ ಮಾತುಗಳಾಗಿ ಬೆಳೆಯುವ ಕ್ರಮ —ಇವಕ್ಕೆ ಇಲ್ಲಿ ಮತ್ತೆ ಮತ್ತೆ ಉದಾಹರಣೆಗಳು ಸಿಕ್ಕುವುವು. ಈ ಖಂಡ ಕಾಣಿ.

ಸಿದ್ಧಾರ್ಥನುಂ ಶ್ರೀಕಾಂತೆಯುಂ ತಮ್ಮೊಳನ್ಯೋನ್ಯ ಸ್ನೇಹದೊಳ್ ಕೂಡಿ [ಇ]ಷ್ಟ ವಿಷ್ಟಯ, ಕಾಮ ಭೋಗಂಗಳನನುಭವಿಸುತ್ತಂ ಪಲಕಾಲಂ ಸಲೆ ಮತ್ತೊಂದು ದಿವಸಂ ಸಪ್ತನಳಪ್ರಾಸಾದದ ಮೇಲಿರ್ವ್ವರುಮಿಷ್ಟಪರಿವಾರ ಸಹಿತಂ ದಿಶಾವಳೋಕ ನಂಗೆಯ್ಯುತ್ತಂ ಸುಖಸಂತಥಾವಿನೋದದಿಂದಪ್ಪುನ್ನೆಗಂ ವಿಚಿತ್ರಮಾಗುತ್ತಿದ್ದ ವಿಮಾನ ಮನೇಱಿ ಆಕಾಶಪಥಕ್ಕೊಗೆದು ಮೇಗೆ ಪೋಪ ವಿದ್ಯಾಧರಯುಗಳಮಂ ಕಂಡಿವರ್ವ್ವರುಂ ಮೂರ್ಛೆವೋಗಿ ಸೀಡಱಿಂದೆಚ್ಚುಸುತ್ತ ಜಾತಿಸ್ಮರರಾಗಿ ತಮ್ಮ ಮುನ್ನಿನ ಭವಮಂ ನೆನೆದು ಸಂಸಾರದ ಪೊಲ್ಲಮೆಯುಮನನಿತ್ಯತೆಯುಮಂ ಬಗೆದು ವೈರಾಗ್ಯಪರರಾಗಿ ಇವರ್ವ್ವರುಂ ತಪಂ ಬಡುವ ಬುದ್ಧಿಯನೊಡೆಯರಾಗಿ ಸ್ವಜನ ಸಂಜನ ಮಂತ್ರಿ ಮಿತ್ರ ವರ್ಗಕ್ಕೆಲ್ಲಂ ಬಱಿಯನಟ್ಟಿ ಬರಿಸಿ ಸಂಸಾರದ ಪೊಲ್ಲಮೆಯುಮಂ ತರತಮ್ಮ ಬಗೆದ ಕಾರ್ಯ್ಯಮುಮನವರ ಮುಂದೆ ನುಡಿದೇವರ್ಗ್ಗಳೆಲ್ಲಂ ನೆರೆದಿಂತೆಂದರಮ್ಮಾ ಪೂರ್ವ ದಿಂದಂ ಬಂದ ಕುಲಸಂತತಿಯಂ ಕಾಪೊರಾರುಮಿಲ್ಲಿಸಿತು ಭಾರಮನಾರ್ಗ್ಗೊಪ್ಪಿಸಿ ತಪಂಬಟ್ಟಪ್ಪಿರವಱಿಂ ಕೆಲವು ಕಾಲದಿಂ ಮಗನಾದೊಡೆ ಮಗಂಗೆ ಸಮಸ್ತ ಭಾರಮಂ ನಿರೂಪಿಸಿ ತಪಂಬಡುವುದೆಂದು ನುಡಿದೊಡೆ ಸಿದ್ಧಾರ್ಥನೆಂದಂ ನಿಮ್ಮೆಲ್ಲರ ಪೇಱ್ದರ ಸಿಂಬುಗೆಯ್ದಪ್ಪೆನೆಂದು ಮಗನಾದಂದೆನ್ನ ತಪಂಬಡುವಂದಾರುರಂ ವಕ್ರಂಬರಸಲ್ಲೆಂದು ನುಡಿದೊಡಂಬಡಿಸಿ ಕೆಲವು ಕಾಲಂ ಪರಿವಾರಂ ಬಾರಿಸೆ ಮಾಣ್ದಿರ್ದಿಷ್ಟವಿಷಯ ಕಾಮ ಭೋಗಂಗಳವನುಭವಿಸುತ್ತಿರೆಯಿರೆ.

(ಡಿ.ಎಲ್.ಎನ್. ಆವೃತ್ತಿ, ಶಾರದಾ ಮಂದಿರ, 1972, ಪುಟ ; 43)

ವಡ್ಡಾರಾಧನೆ ಬಗ್ಗೆ ಬರೆದ ಹಿರಿಯರು ಇದನ್ನು ಜೈನಕೃತಿ ಎಂದು ಕರೆದಿರುವರು. ಆದರೆ ಇದು ಜೈನ ತತ್ತ್ವಪ್ರತಿಪಾದನೆಗೆ ಸೀಮಿತವಾದ ಕೃತಿ ಎಂಬರ್ಥದಲ್ಲಿ ಮಾತ್ರ ಈ ಮಾತನ್ನು ಹೇಳಲಾಗದು. ಶಿವಕೋಟ್ಯಾಚಾರ್ಯ ಜೈನ ತತ್ತ್ವಗಳನ್ನು ಜೀವನ ವನ್ನು ತಿಳಿದುಕೊಳ್ಳುವ ಒಂದು ಮಾಪನವಾಗಿ ಮಾತ್ರ ಬಳಸುವನು. ಮತ್ತು ಈ ಕತೆಗಳ ಮೂಲ ಸಂವೇದನೆ ಆಧುನಿಕ. ಉದಾಹರಣೆಗೆ ಸುಕೌಶಳ ಸ್ವಾಮಿಯ ಕಥೆ

ಯನ್ನೇ ನೋಡುವ. ಕ್ರೌರ್ಯ, ಅಸೂಯೆ ಮತ್ತು ದ್ವೇಷಗಳ ಮೇಲಿನ ಕಥೆ ಇದು. ಜಯಾವತಿಗೆ ಭಟಾರರು ಹೇಳಿರುತ್ತಾರೆ: ನಿನಗೆ ಮಕ್ಕಳಾಗುತ್ತವೆ. ಆದರೆ "ಪೆತ್ತಾಗಳೆಂತು ಪುಣ್ಣಮಿಯ ದಿನ ಚಂದ್ರನಂ ಕಂಡಾಗಳಾದಿತ್ಯನಸ್ತಮಾನಕ್ಕೆ ಸಲ್ಲುಮಂತೆ ಮಗನಂ ಕಂಡಾಗಳ್ ನಿನ್ನ ಭರ್ತಾರನುಂ ತಪಂಬಡುಗುಮುಂ ರಿಸಿಯರುಂ ಕಂಡಾಗಳ್ ಮಗನುಂ ತಪಂಬಡುಗುಂ". ಆನಂತರ ಗಂಡನಿಗೆ ಗೊತ್ತಾಗದಂತೆ ಮಗನನ್ನು ಹೆರುವುದು, ಅವನಿಗೆ ಅದುಗೊತ್ತಾಗಿ ಮಗನನ್ನು ನೋಡಿ ಸನ್ಯಾಸ ಸ್ವೀಕರಿಸಿ ಹೋದ ಮೇಲೆ ತನ್ನ ಮಗ ತಂದೆಯನ್ನು ನೋಡದಂತೆ ಕಾಪಿಡುವುದು. ಆಕಸ್ಮಾತ್ ಆತ ನೋಡಿ ಅದು ಯಾರೆಂದು ಕೇಳಿದಾಗ ಆತನ ಬಗ್ಗೆ ತಿರಸ್ಕಾರಪೂರ್ಣ ಮಾತಾಡುವುದು ಹೇಗಾದರೂ ಮಾಡಿ ಸಂಸಾರವನ್ನುಳಿಸಬೇಕೆಂಬ ಹೆಣ್ಣಿನ ಇಚ್ಛೆಯನ್ನು, ಸಂಸಾರ-ಸನ್ಯಾಸಗಳ ತಾಕಲಾಟವನ್ನು ಚಿತ್ರಿಸುತ್ತದೆ. ಗಂಡನನ್ನಾಗಲೀ, ಮಗನನ್ನಾಗಲೀ ಸಂಸಾರದಲ್ಲಿ ತಾನು ಉಳಿಸಿಕೊಳ್ಳಲಿಲ್ಲವೆಂಬ ಜಯಾವತಿಯು ನಿರಾಸೆ ಹೊಂದಿ ತಲುಪುವುದು ಕ್ರೌರ್ಯದ ಪರಮಾವಧಿ ಹಂತವನ್ನು. ಆಕೆ ಮುಂದಿನ ಜನ್ಮದಲ್ಲಿ ಹುಲಿಯಾಗಿ ತನ್ನ ಮಗನನ್ನು ಕೊಂದು ತಿನ್ನುತ್ತಾಳೆ: ದಯೆ-ದಾಕ್ಷಿಣ್ಯಗಳಿಲ್ಲದ, ಪಶುಭಾವನೆ ಮಾತ್ರ ಜಾಗೃತವಾದ ಕ್ರೂರ ಮನುಷ್ಯರ ಕತೆಗಳನ್ನು ಶಿವಕೋಟ್ಯಾಚಾರ್ಯ ಮತ್ತೆ ಮತ್ತೆ ಬರೆಯುತ್ತಿದ್ದಾನೆ.

ಕ್ರೌರ್ಯದ, ಮತ್ತು ಹುಚ್ಚು ಕಾಮದ ಇನ್ನೊಂದು ಚಿತ್ರಣ ನಮಗೆ ಕಾಣುವುದು ಗಜಕುಮಾರನ ಕತೆ ಎಂಬ ಕತೆಯಲ್ಲಿ. ಇಲ್ಲಿನ ಗಜಕುಮಾರ ರಾಜನ ವೈರಿಯನ್ನು ಸೋಲಿಸುತ್ತಾನೆ. ಅದನ್ನು ಮೆಚ್ಚಿದ ರಾಜ ಬೇಕಾದ ವರ ಕೇಳು ಎಂದಾಗ ಆತ ಕೇಳಿದ್ದು—"ನಿಮಂತಃಪುರ ಮುಳ್ಳಿಯೆ ಪೊಱಲೊಳಗೆನ್ನ ಮೆಚ್ಚಿದ ಪೆಂಡಿರನೆ ಕೊಂಡೆನ್ನಿಚ್ಛೆಯೊಳ್ ಮೆಚ್ಚಿದಂತೆ ಬಾೞ್ವೆ ದಾಯುವಂ ಬೇಡಿರ್ದೆನಿದನೆನಗೆ ದಯೆಗೆಯ್ದು ಸಲಿಸುವುದು" ಎಂದು, ಅರಸನಿಂದ ಇದಕ್ಕೆ ಒಪ್ಪಿಗೆ ಸಿಕ್ಕಿದ ಮೇಲೆ ಆತ ತಾನು ಮೆಚ್ಚಿದ ಹೆಂಗಸರನ್ನು ಕೂಡುತ್ತಾ ತನಗೆ ಬೇಕಾದ ರೀತಿ ಜೀವನ ಮಾಡಲು ಪ್ರಾರಂಭಿಸುವನು. ಅರಸನಿದ್ದೂ ಆಡಳಿತವಿಲ್ಲದ ರಾಜ್ಯವಾಗುತ್ತದೆ ಅದು. ನೀತಿ ನಿಯಮಗಳನ್ನು ಗಾಳಿಗೆ ತೂರಿದ ಹುಚ್ಚು ಕಾಮ ಗಜಕುಮಾರನದ್ದು. ಮತ್ತೆ ಅದು ಕೊನೆಗೊಳ್ಳುವುದು ಆತನ ಆತ್ಮಜ್ಞಾನದಿಂದ. ಆದರೆ ಆಗ ಅಪ್ಪನೆಂದಾಗಿ ಹೆಂಡತಿಯನ್ನ ಕಳೆದುಕೊಂಡ ಪಂಗುಳ ಪ್ರತೀಕಾರಕ್ಕಾಗಿ ಕಾದಿದ್ದಾನೆ. ಅದೂ ಅತ್ಯಂತ ಕ್ರೂರವಾಗಿ; ಮಹಾಮುನಿಯಂ ನುಲರ್ಚಿ ಪಟ್ಟರಿಸಿಯುರಃಸ್ಥಲಮಾ ನಾಭಿವರೆಗಂ ವಿದಾರಿಸಿ ಪಂದೊವಲ್ ಪೊರೆಪಾಪಿನೆಗಂ ಸಮನ್ತವಯವ ಪ್ರದೇಶಂಗಳೊಳ್ ಕಾಯ್ದ ಕಬ್ಬೊನ್ನ ಕೀಲ್ಗಳಂ ನೆಲನಂ ತಾಟನಮುರ್ಚಿ ಪೋಗಿಱಿದು".

ಪರಸ್ಪರ ದ್ವೇಷ, ಅಸೂಯೆ, ಸಿಟ್ಟು, ಹುಚ್ಚು ಕಾಮ, ಅದರ ಪರಿಣಾಮ ಮತ್ತು ಘನಘೋರ ವೈರಾಗ್ಯ-ಇವುಗಳ ಪ್ರಪಂಚ ವಡ್ಡಾರಾಧನೆಯದ್ದು. ಇದರಲ್ಲಿ

ತಂದೆ-ತಾಯಿ-ತಂಗಿ-ತಮ್ಮ ಮೊದಲಾದ ಸಂಬಂಧಗಳಿಲ್ಲ. ಯಾಕೆಂದರೆ ಜನ್ಮವೇ ಸ್ಥಿರವಲ್ಲ. ಈ ಜನ್ಮದಲ್ಲಿ ನಡೆದ ಘಟನೆಯ ವಿರುದ್ಧ ಮುಂದಿನ ಜನ್ಮದಲ್ಲಿಯೂ ಇವರು ಸೇಡು ತೀರಿಸಿಯಾರು. ಯಾಕೆಂದರೆ ಮುಖ್ಯವಾಗಿ ಇರುವುದೇ ಸೇಡು, ಸಿಟ್ಟು, ದ್ವೇಷ. ಇದನ್ನು ಒಬ್ಬಾತ ಮೀರುವುದು ತನ್ನ ಆಚರಣೆಗಳಿಂದ, ಮನಸ್ಸು ದೇಹಗಳನ್ನು ಹದಕ್ಕೆ ತರುವುದರಿಂದ. ಅದಲ್ಲದೆ ಹೋದರೆ. ಈ ಪ್ರಪಂಚದಲ್ಲಿ ಆಶೀರ್ವಾದ ಮಾಡುವ ಅಥವಾ ಸನ್ಮಾರ್ಗ ಹೊಳೆಯಿಸುವ ದೇವರು ಸಮೇತ ಇಲ್ಲ. ಅಥವಾ ಇದ್ದರೂ ಆತನ ಸಹಾಯವನ್ನು ಮನುಷ್ಯ ತನ್ನ ಉನ್ನತಿಗಾಗಿ ನಿರಾಕರಿಸ ಬೇಕಾಗುವುದು; ದಿವ್ಯ ದೇಹ ಇಚ್ಛಿಸಿದ ಸನತ್ಕುಮಾರ ಚಕ್ರವರ್ತಿ ದೇವರ ಔಷಧಿ, ಕೃಪೆಗಳನ್ನು ನಿರಾಕರಿಸಿದಂತೆ.

ಭಾರತೀಯ ಅಥವಾ ಕನ್ನಡ ಸಾಹಿತ್ಯದಲ್ಲಿ ಕರಾಳತೆಯ ಚಿತ್ರಣವಿಲ್ಲ ಎನು ವವರು ವಡ್ಡಾರಾಧನೆಯನ್ನು ಅವಶ್ಯ ಓದಬೇಕು. ಮನುಷ್ಯನ ಮನಸ್ಸು ಕಂತಬಹು ದಾದ ಕೇಡಿನ, ಕರಾಳತೆಯ ಆಳಪಾತಾಳಗಳನ್ನು ಮಗುಚಿಹಾಕುತ್ತಾನೆ ಶಿವಕೋಟ್ಯಾ ಚಾರ್ಯ. ಮನುಷ್ಯ ಸ್ವಭಾವದ ಬಗ್ಗೆ ಯಾವ ಭ್ರಮೆಗಳೂ ಇಲ್ಲದವನೀತ. ಅರಿವೇ ಈತನ ಮೌಲ್ಯ—ಎಲ್ಲವನ್ನೂ ಬಿಚ್ಚಿ ಬತ್ತಲಾಗಿಸಿದ ಮೇಲೆ ಸಿಗುವ ಸಂಪೂರ್ಣ ಅರಿವು.

ಕರಾಳತೆಯ ಚಿತ್ರಣದಲ್ಲಿ ಮಾತ್ರವಲ್ಲ, ಉಳಿದ ಕೆಲವು ವಸ್ತುಗಳ ದೃಷ್ಟಿಯಿಂದ ಸಮೇತ ಈತ ಆಧುನಿಕನಾಗಿದ್ದಾನೆ. ಉದಾಹರಣೆಗೆ ಆತನ ಸನಕ್ಕುಮಾರ ಚಕ್ರವರ್ತಿಯ ಕಥೆ ದೇಹ-ಮನಸ್ಸುಗಳ ಸಂಬಂಧದ ಬಗ್ಗೆ ಬರೆದ ಕತೆ. ಸನತ್ಕುಮಾರ ಚಕ್ರವರ್ತಿ ಅಪ್ರತಿಮ ಚೆಲುವ—ದೇವರೂ ಮೆಚ್ಚಿ ತಲೆದೂಗುವಷ್ಟು. ಆದರೆ ದೇವರುಗಳು ಅರೆಕ್ಷಣದಲ್ಲಿ ಆ ದೇಹಕ್ಕೆ ವಯಸ್ಸಾಗಿ ಅದರ ಕಾಂತಿ ಮಸಳಿಸಿದ್ದನ್ನು ಕಂಡು ಹಾಗೆಂದು ಅವನಿಗೆ ಹೇಳುತ್ತಾರೆ. ಆ ಕ್ಷಣದಿಂದ ಆತನ ಇಚ್ಛೆ ಕಾಲದಿಂದಾಗಿ ಮಸಳಿಸದ, ರೋಗರುಜಿನಗಳಿಂದ ಅಬಾಧಿತವಾದ ದಿವ್ಯದೇಹವೊಂದನ್ನು ಪಡೆಯ ಬೇಕೆಂದು. ಈ ಕಾರಣಕ್ಕಾಗಿ ದೇಹ ಕೊಡುವ ಸಕಲ ಬಾಧೆಗಳನ್ನು ಆತ ಪ್ರತಿಭಟಿಸದೆ ಅನುಭವಿಸುತ್ತಾನೆ—ಮನಸ್ಸು ಮತ್ತು ದೇಹ ಸಂಬಂಧಿಸಿದ. ಅವುಗಳ ಮಧ್ಯೆ ಯಾವ ಕಂದಕವಿಲ್ಲದ ದಿವ್ಯ ದೇಹವೊಂದನ್ನು ಪಡೆಯುವವರೆಗೆ. ನನಗೆ ಈ ಕಥೆಯನ್ನು ಓದುತ್ತಿದ್ದಾಗ ಭೂತ–ಭವಿಷ್ಯ–ವರ್ತಮಾನಗಳ ಬಗ್ಗೆ ಹಾಡಬಲ್ಲ. ಮೃತತ್ವವನು ದಾಟನಿಂತ ದಿವ್ಯದೇಹಕ್ಕೆ ಇಚ್ಛಿಸಿದ ಯೇಟ್ಸ್‌ನ Sailing to Byzantiumನ ಈ ಸಾಲುಗಳು ನೆನಪಾದವು :

An aged man is but a paltry thing
A tattered coat upon a stick, unless

Soul clap its hands and sing, and louder sing
For every tatter in its mortal dress

ಮತ್ತು

Once out of nature I shall never take
My bodily form from any natural thing

ದೇವರು ಕಳಿಸಿಕೊಟ್ಟ ಔಷಧಿಯನ್ನು ಬೇಡವೆಂದಾಗ ಸನಕ್ಕುಮಾರ ಹೇಳ ಬಹುದಾಗಿದ್ದ ಸಾಲುಗಳು ಇವು

5

ಅರಿವು ಮತ್ತು ಅದರಿಂದ ಪಡೆಯುವ ಆನಂದ ಬೇಂದ್ರೆಯವರು ಸುಮಾರು ತಮ್ಮ ಐವತ್ತನೆಯ ವಯಸ್ಸಿನ ನಂತರ ಬರೆದ ಕವನಗಳ ಮುಖ್ಯವಸ್ತು.

ಬೇಸರವನ್ನು ಹೇಗೆ ಪರಿಹರಿಸಿಕೊಳ್ಳಬೇಕು. ಆನಂದವನ್ನು ಹೇಗೆ ಪಡೆಯಬೇಕು ಎಂಬುದು ಶುರುವಿನಿಂದ ಬೇಂದ್ರೆಯವರ ಕಾಳಜಿಯಾಗಿತ್ತು. 'ಕುಣಿಯೋಣ ಬಾರs!' ಪದ್ಯದಲ್ಲಿ ಅವರು ಕುಣಿತ ತರುವ ದೈಹಿಕ ಉಲ್ಲಾಸದಲ್ಲಿ ಈ ಆನಂದವನ್ನು ಹುಡುಕುವರು. ಕುಣಿಯುವುದು ದಿನಂದಿನದ ಕೀಸರು, ಬೇಸರಗಳನ್ನು ಮೀರಿದ, ಮುಪ್ಪನ್ನು ಆತ್ತದೂಡಿದ ಕ್ರಿಯೆ. ಇದು ಚಿರಯೌವನ. ಬೇಂದೆ ಕುಣಿತಕ್ಕೆ ಇಂತು ಆಹ್ವಾನಿಸುವರು :

ಕೀಸರು
ಬಾಸರು
ಇಟ್ಟೆರು ನಿಟ್ಟುಸಿರು
ಕುಣಿತಾನs ಆಸರು ! ಕುಣಿ........
ಹರಿದರು ನೆತ್ತರು
ಉಳ್ಳವರು ಸತ್ತರು
ಒಳ್ಳೆವರು ಅತ್ತರು ! ಕುಣಿ .......

ಪದ್ಯದುದ್ದಕ್ಕೆ ದಿನಂದಿನದ ಯಾಂತ್ರಿಕ ಜೀವನ ; ಸಾವಿನ ಅಥವಾ ಕಾಸಿನ ಅಥವಾ ಸಂಸಾರದ ಚಿಂತೆ ; ಮತು ಇವಕ್ಕೆ ವಿರುದ್ಧವಾಗಿ, ಇವು ಸಕಲವನ್ನು ಮರೆಸಬಲ್ಲ. ಕಾಲವನ್ನು ಒಂದು ಸುಖದ ಕ್ಷಣದಲ್ಲಿ ಹಿಡಿದು ನಿಲ್ಲಸಬಲ್ಲ ಕುಣಿತ್ರ. —ಇವುಗಳ ಚಿತ್ರಣ ಬರುತ್ತದೆ. ಆದರೆ ಪದ್ಯ ಬೆಳೆದಂತೆ ಈ ವಿಶ್ವವೇ ಕುಣಿತಕ್ಕೆ ಪ್ರತಿಸ್ಪಂದಿಸಿ ಉಲ್ಲಾಸಮಯವಾಗುತ್ತದೆ.

ನೆಲದೊಡಲು
ಕುಣಿಯಲು
ಕುಣಿಕುಣಿದಿತು ಕಡಲು
ಮಿಡಿದಿತು ಸಿಡಿಸಿಡಿಲು! ಕುಣಿ...
ಹಗಲಿರುಳ ತಾಳಕ್ಕ
ಮುಗಿಯದ ಕಾಳಕ್ಕ
ಜನುಮಗಳ ಮ್ಯಾಳಕ್ಕ! ಕುಣಿ....

ಆದ್ದರಿಂದ ಕುಣಿಯುವುದು ಜೀವನದ ಯಾಂತ್ರಿಕತೆಯಿಂದ ಪಲಾಯನವಲ್ಲ. ತಾನು ಕುಣಿಯುವುದುದರಿಂದ ಇಡೀ ವಿಶ್ವ ಆನಂದಮಯವಾಗಿ ಕುಣಿದು, ಪ್ರತಿಪದಾರ್ಥ ಕುಣಿದು, ವಿಶ್ವದಿಂದ ಬೇಸರ, ಮುಪ್ಪು ಸಾವುಗಳು ಇಲ್ಲವಾಗುತ್ತದೆಂಬ ಆಶಯ ಈ ಪದ್ಯದ್ದು. ಕೊನೆಯ ಸಾಲುಗಳಲ್ಲಿ ವ್ಯಕ್ತವಾಗುವುದು ಇಂತು ಪರಿ ಆಶಯವೇ :

ಆ ಕ್ಷೀರ-
ಸಾಗರ-
ದಾನಂದದಾಗರ
ತೆರಿತೆರಿ ತೆರದರ! ಕುಣಿ....
ಹದಿನಾಲ್ಕು ಲೋಕಕ್ಕ
ಚಿಮ್ಮಲಿ ಈ ಸುಖ
ಹಿಗ್ಗಲಿ ಸಿರಿಮುಖ! ಕುಣಿ....

ಆದರೆ ಅರಳು-ಮರಳು ಸಂಗ್ರಹಕ್ಕೆ ಬರುವ ಹೊತ್ತಿಗೆ ದೈಹಿಕ ಉಲ್ಲಾಸ ಒಂದರಿಂದ ಮಾತ್ರ ಆನಂದ ಸಿಕ್ಕುವುದಿಲ್ಲ. ಯಾಕೆಂದರೆ, ಈಗ ಅರಿವಿನಿಂದ ಪಡೆಯುವ ಆನಂದ ದೈಹಿಕ ಉಲ್ಲಾಸದಿಂದ ಪಡೆಯುವ ಆನಂದದಷ್ಟೇ ಪರಿ ಮುಖ್ಯವಾಗುವುದು. ಅರಳು-ಮರಳು ಸಂಗ್ರಹದ 'ಪ್ರಾರ್ಥನೆ' ಪದ್ಯದ ಈ ಸಾಲುಗಳು ಅವರ ಆ ಸಂಗ್ರಹದ ಅನೇಕ ಮುಖ್ಯ ಕವನಗಳ ಕಾಳಜಿಯನ್ನು ಪ್ರತಿಬಿಂಬಿಸುವವು.

ಅರಿವಿನ ಆನಂದ ಪಡೆಯಲು
ಆ ಆನಂದದಲ್ಲಿ ನಡೆಯಲು- ಈ ಜೀವ
ನಿರಂತರವಾದಿ ಉನ್ಮುಖವಾಗಿದೆ; ಸರ್ವತೋಮುಖವಾಗಿದೆ.

ದೈಹಿಕ ಉಲ್ಲಾಸದಿಂದ ಬಂದ ಆನಂದ ಮತ್ತು ಅರಿವಿನ ಆನಂದ-ಇವೆರಡನ್ನು ಒಟ್ಟಾಗಿ ಪಡೆಯ ಬೇಕಾದ್ದನ್ನು ಅಭಿವ್ಯಕ್ತಿಸುವ ಅವರ ಕವನ 'ನೃತ್ಯಯಜ್ಞ'. ಇಲ್ಲಿನ

ನವಿಲು ದೈಹಿಕ ಉಲ್ಲಾಸವನ್ನಂತು ಪರಿ ಅಂತೆ ಪರಿ ಎಚ್ಚೆತ್ತ ಪ್ರಜ್ಞೆಯನ್ನು ಪ್ರತಿಬಿಂಬಿಸುವುದು. ಈ ಪದ್ಯದ ವಿಶ್ಲೇಷಣೆಯಿಂದ ಬೇಂದ್ರೆಯವರ ಕಾವ್ಯದ ಇನ್ನು ಕೆಲವು ಸಂಗತಿಗಳನ್ನು ತಿಳಿಯಬಹುದು. ಈ ಸಂದರ್ಭದಲ್ಲಿ. ಈ ಪದ್ಯವನ್ನು ಇದು ಮೊದಲು ವಿಶ್ಲೇಷಿಸಿರುವ ಕೀರ್ತಿನಾಥ ಕುರ್ತಕೋಟಿ ಮತ್ತು ಡಿ.ಆರ್. ನಾಗರಾಜ್ ಅವರ ವಿಶ್ಲೇಷಣೆಗೆ ನಾನು ಓದುಗರ ಗಮನವನ್ನು ಸೆಳೆಯಬಯಸುವೆನು.

> ಗಿರಿಶಿಖರದಿ ಶಿಖಿಯನೆತ್ತಿ ಶಿಖಿಯು ಕೇಕೆ ಕರೆವುದು:
> "ನೋಡ ಬಂತು ಮಿಂಚಿತಂತು ಗುಡುಗು ಮಳೆಯು ಬರುವುದು"
> ಜಗವೆಲ್ಲವು ಮೊರೆಯಿಡುತಿರೆ ಕುಣಿಯುತ್ತಿದೆ ಕೇಕೀ
> ಸಖಿಸಂಮುಖ ತಲ್ಲೀನತೆಯಲಿ ಏಕಾಕಿ
> ಹೇ ಶಿಖಂಡಿ ಹೇ ತ್ರಿದಂಡಿ ನಿನ್ನೊಡ ಚಾಮುಂಡೀ.
> ತಾಂಡವಕ್ಕೆ ಹಾಸ್ಯಲಾಸ್ಯ ಬೆರೆಸುವ ರಣ ಚಂಡೀ.
> "ದಿಕ್ಕು ದಿಕ್ಕು ಕತ್ತಲಿಸಿತು ಪ್ರಳಯವೆ ಇದು ಬಂತೇ
> ಮುಳುಗಿಸುವದೇ ತೇಲಿಸುವದೇ ಕಾಲವೆ ಎಂಬಂತೆ".
> "ಥಕ ಥೈ ಥೈ ಧಿಕಿ ತಟತೊಂ ಇದೇ ತಾಲ ಮಳೆಯದೋ
> ಹಳ್ಳಕೊಳ್ಳ ಗಿರಿದರಿಯಲಿ ಹರಿಯುತ್ತಿಹ ಹೊಳೆಯದೋ?
> ಬರಲಿಹ ಬೆಳೆ ಪಯಿರಿನಲ್ಲಿ ಕುತುಕದಿಂದ ಕುಣಿವುದೋ
> ಋತು ರಾಜನ ಋತಜಾತದ ಜೀವನದಲಿ ಋಣವಿದೋ!
> ಓ ಕುಮಾರ, ಬೇಗ ಬಾರ, ತುಂಬಿ ತಾರ, ಬೆಳೆಯನು.
> ಕಾರ್ತಿಕದಲಿ ಭೂಮಿ ಕಾಂಬ ಶಾರದೀಯ ಕಳೆಯನು
> ಆಹಾ ಸಖಿ, ಆಹಾ ಸುಖಿ, ಸಾವಿರ ಶಿಖಿ ಹೊತ್ತಿವೆ."

ಮೊದಲು ಸಾಲುಗಳು ಸಖಿಸಂಮುಖದಲ್ಲಿ ತಲ್ಲೀನವಾಗಿ ಕುಣಿಯುತ್ತಿರುವ ನವಿಲಿನ ಚಿತ್ರ ಕೊಡುತ್ತವೆ. ಜಗ ಮೊರೆಯಿಡುತ್ತಿರುವಾಗ, ದಿಕ್ಕು ದಿಕ್ಕು ಕತ್ತಲಿಸುತ್ತಿರುವಾಗ ಕುಣಿಯುವ ನವಿಲು ಇದು. ಈ ಮೂಲಕ ಬೇಂದ್ರೆಯವರು ವಿನಾಶದ ವಿರುದ್ಧ ಮೌಲ್ಯವಾಗಿ ಈ ಸಾಲುಗಳಲ್ಲಿ ಸೂಚಿಸುವುದು ಕುಣಿತದ ಆನಂದವನ್ನು ಮತ್ತು ಉಲ್ಲಾಸವನ್ನು. ವಿನಾಶದ ಎದುರು ದೈಹಿಕ ಉಲ್ಲಾಸವನ್ನು ತಂದು ನಿಲ್ಲಿಸುವ ಈ ನೆಲೆ 'ಕುಣಿಯೋಣ ಬಾರ'ದ ನೆಲೆ. ಆದರ 'ಕುಣಿಯೋಣ ಬಾರ' ದಲ್ಲಿ ದೈಹಿಕ ಉಲ್ಲಾಸ ವಿನಾಶವನ್ನು ಎದುರಿಸಬಲ್ಲ ಪರಮ ಮೌಲ್ಯವಾಗಿದ್ದರೆ ಇಲ್ಲಿ ಅದು ಹಾಗಲ್ಲ. ಯಾಕೆಂದರೆ ನವಿಲಿನ ನೃತ್ಯದ ಹೊರತಾಗಿ ಸಹಾ ಹೊಸ ಸಂಕಟದ ಅಲೆಗಳು ಬರುತ್ತಿವೆ:

ಕುಣಿಯೊ ಕುಣಿ ಸಹಸ್ರಮುಖೀ ಆಸೆ ತಲೆಯುನೆತ್ತಿವೆ
ಅನ್ನ ಅನ್ನ ಬುಸುಗುಡುತಿದೆ ಮಾನವನಾಗರವು
ತೆರೆತೆರೆಯುಲಿ ತೆರೆಯಿತು ನವದುಃಖದ ಸಾಗರವು
ತಾರಕ ಸಂಹಾರಕನಾಗುತ ಆಗೊ ಕಂದರ್ಪ
ದರ್ಪದಿಂದ ಹೆಡೆಸೆಡೆಯುತ ತಾಂಡವಿಸಿತು ಸರ್ಪ

ಕೇಡು ಪ್ರಕೃತಿಯಿಂದಾಗಿ ಎಂತು ಪರಿ ಅಂತೆ ಪರಿ ಮನಸ್ಸಿನಿಂದ ಸಮೇತ ಹುಟ್ಟಿದೆ. ಪ್ರಕೃತಿಯ ಒಂದಂಗವಾದ ಪ್ರಳಯ ಒತ್ತರಿಸಿ ಬರುತ್ತಿದ್ದರೆ ಮನಸ್ಸಿನಿಂದ ಹುಟ್ಟಿದ ದರ್ಪ ಸಮೇತ ಹೆಡೆ ಸೆಟೆಸಿ ಎದುರು ನಿಂತಿದೆ. ಜೊತೆಗೆ, ಅನ್ನ ಅನ್ನ ಎಂದು ಬುಸುಗುಡುವ ಮಾನವನಾಗರ ಸುತ್ತುವರೆದಿದೆ. ಆದರೆ ಮುಂದಿನ ಸಾಲುಗಳಲ್ಲಿ ಪ್ರಳಯ ಸೃಜನಶೀಲ ಮಳೆಯಾಗಿ ಪರಿವರ್ತಿತವಾಗಿ ಫಲಸಂಮೃದ್ಧಿ ದೊರೆತ ಚಿತ್ರ ಬರುತ್ತದೆ :

ಬೇಸಗೆ ಸೆಖೆ ಶಿಖೆಗಂಡಿತು ಶತದಳ ಮುಖ ಉರಿಯೇ
ಹುಬ್ಬಿನ ಮಬ್ಬಿನ ಬಸಿರ್ ಬಂಗಾರದ ಬಾಯ್ದೆರೆಯೇ

ಮಳೆ ಪ್ರಳಯವಾಗದೆ ಸೃಜನಶೀಲವಾಗಿದ್ದರ ಪರಿಣಾಮವಾಗಿ ಸೆಖೆ ಶಿಖೆ ಗಂಡಿದೆ. ಭೂಮಿಯ ಬಸಿರು ಬಂಗಾರದ ಬಾಯ್ದೆರೆದಿದೆ. ಇದೇ ಅನ್ನ ಅನ್ನ ಎಂದು ಬುಸುಗುಟ್ಟುವ ಮಾನವ ನಾಗರಕ್ಕೆ ಉತ್ತರ. ಮೊದಲ ಸಾಲುಗಳಲ್ಲಿ ಬಂದ ಹೆಣ್ಣು-ಗಂಡು ನವಿಲಿನ ಪ್ರಣಯ ನೃತ್ಯ ಸಮೇತ ಈಗ ಸೃಜನಶೀಲವಾಗಿ ಪರಿವರ್ತಿತ ವಾಗಿದೆ. ಯಾಕೆಂದರೆ ಬಸಿರು ಬಂಗಾರದ ಬಾಯ್ದೆರೆದಿದೆ ಎಂಬ ಪದಪುಂಜವನ್ನು ಹೆಣ್ಣು ನವಿಲಿಗೆ ಸಂಬಂಧಿಸಿದಂತೆ ಸಹಾ ಅನ್ವಯಿಸಿ ಅರ್ಥೈಸಬಹುದು. ಈ ನೆಲೆ ಯಲ್ಲಿ, ದೈಹಿಕ ಉಲ್ಲಾಸದ ನೃತ್ಯ ಪರಮಮೌಲ್ಯವಲ್ಲದೆ ಹೋದರೂ ಅನೇಕ ಕೇಡುಗಳನ್ನು ಎದುರಿಸಿ ನಿಲ್ಲಬಲ್ಲ ಸೃಜನಶೀಲ ಮೌಲ್ಯವಾಗಿ ಮಾತ್ರ ಉಳಿದಿದೆ.

ಕವನ ಬಹಳ ಮೇಲು ಮಟ್ಟದ್ದಾಗುವುದು ಅದು ಅರಿವು ಮತ್ತು ನೃತ್ಯವನ್ನು ಬೆಸೆಯುವ ಕ್ರಮದಿಂದ. ನಾಟ್ಯ ಸೃಜನಶೀಲ ಮೌಲ್ಯವಾಗಿದೆ, ನಿಜ; ಆದರೆ. ಹೆಡೆ ಸೆಡೆಯುವ ದರ್ಪದೆದುರು ಅದು ಸರ್ವಪರಿಹಾರಿ ಔಷಧಿಯಲ್ಲ. ದರ್ಪವನ್ನು ಎದು ರಿಸುವ ಮೌಲ್ಯವಾಗಿ ಬೇಂದ್ರೆ ಒತ್ತುಕೊಡುವುದು ಎಚ್ಚೆತ್ತ ಅರಿವಿಗೆ, ಸುಪ್ತಪ್ರಜ್ಞೆ ಜಾಗೃತವಾದಾಗ ಬಿಡುಗಡೆಯಾಗುವ ಶಕ್ತಿಗೆ :

ಅಗ್ನಿದೇಹಿ ಆತ್ಮಸ್ನೇಹಿ ಬಾರೋ ಬಾs ಷಣ್ಮುಖಾ
ಚತುರಂಗದ ಚಾತುರ್ಯದ ಜ್ಞಾನಕರ್ಮ ಸಮಸುಖಾ
ಶಿಖಿಗಂಡನೆ ಮೈಗೊಂಡನೆ ಕೆಂಗೆಂಡನೆ ತೋರ್ರೈ
ದೇವತೆಗಳ ಸೇನಾಪತಿ ಭೂರಂಗಕೆ ಬಾರೈ

ಮಾನವನಾಗರದ ಸಮಸ್ಯೆಯಾವ ಅನ್ನದ ಸಮಸ್ಯೆ ಬಗೆಹರಿಯುವುದು. ಭೂಮಿಯು ಬಸಿರು ಬಂಗಾರದ ಬಾಯ್ದೆರೆಯುವುದರಿಂದ. ಈ ಸೃಜನಶೀಲತೆ ಹೆಣ್ಣು-ಗಂಡು ಮಟ್ಟದಲ್ಲಿ ಪ್ರಣಯ ನೃತ್ಯದ ದೈಹಿಕ ಉಲ್ಲಾಸದಲ್ಲಿ ವ್ಯಕ್ತವಾಗುತ್ತದೆ. ಆದರೆ, ದರ್ಪದಿಂದ ಹೆಡೆಸೆಟೆಯುವ ಅಹಂಕಾರದ ತಾಂಡವನೃತ್ಯವನ್ನು ಹತೋಟಿಗೆ ತರುವುದು ಮಾತ್ರ ಅಂತಜ್ಞಾನದಿಂದ, ದೇಹದ ಕಣ ಕಣದಲ್ಲಿ ಅರಿವಿನ ಕಣ್ ತೆರೆಯುವುದರಿಂದ, ಸುಪ್ತಪ್ರಜ್ಞೆಯು ಎಚ್ಚತ್ತುವಿಕೆಯಿಂದ. ಇದು ಜ್ಞಾನ-ಕರ್ಮದ ಸಮುಚ್ಚಯ. ಸುಪ್ತಪ್ರಜ್ಞೆ ಎಚ್ಚತ್ತಾಗ—

ಅಕ್ಷರದೀ ಬ್ರಹ್ಮಕೃತ್ಯ ನಿತ್ಯದ ಈ ನೃತ್ಯ
ಚಿತ್ತದಲ್ಲಿ ಚಿತ್ರಿಸುತಿರೆ ಮರ್ತ್ಯವಹುದಮರ್ತ್ಯ

ದೈಹಿಕ ಉಲ್ಲಾಸದ ನೃತ್ಯ ಮತ್ತು ಅರಿವು ಇವುಗಳ ಐಕ್ಯಸಮದ ಬಗ್ಗೆ ಬೇಂದ್ರೆ ಇಲ್ಲಿ ಬರೆಯುತ್ತಿರುವರು. ನವಿಲುಯುಗಳಗಳ ಮತ್ತು ಪ್ರಕೃತಿಯ ನೃತ್ಯ ಬಸಿರು ಬಂಗಾರದ ಬಾಯ್ದೆರೆಯುವ ಸೃಜನಶೀಲತೆ ತಲುಪಿದ್ದರೆ, ಅರಿವು ದರ್ಪವನ್ನು ಹತೋಟಿಗೆ ತರುವಂತೆ ಆತ್ಮಶಿಖೆಯನ್ನು ಎಚ್ಚರಿಸುವ ಹಂತ ತಲುಪಿದೆ. ಇದು ಅರಿವಿನ ಮತ್ತು ದೈಹಿಕ ಉಲ್ಲಾಸದ ಸಮಾಗಮ. ಜೊತೆಗೆ, ಇಲ್ಲಿ ಜ್ಞಾನ ಮತ್ತು ಕರ್ಮ, ಬುದ್ಧಿ ಮತ್ತು ಚತುರಂಗಬಲ ಬೆರೆತಿವೆ.

6

ಅರಿವು ಪೂರ್ವದ ಮನಸ್ಥಿತಿಯ ಪರಿಣಾಮವಾದ ಬೆತ್ತಲೆ ಸೇವೆಯಿಂದ ಸುರುಗೊಂಡು ಶಿವಕೋಟ್ಯಾಚಾರ್ಯ ಮತ್ತು ಬೇಂದ್ರೆಯವರ ಬಗ್ಗೆ ಈ ಹಿಂದಿನ ಪುಟಗಳಲ್ಲಿ ಲಿಖಿಸಲಾಯಿತು. ಈ ಲೇಖಕರು ಅರಿವನ್ನು ಮತ್ತು ಉಲ್ಲಾಸವನ್ನು ತಮ್ಮ ಕೃತಿಗಳಲ್ಲಿ ಎಂತು ಪರಿ ನಿರ್ವಹಿಸುವರು ಎಂದು ತಿಳಿದುಕೊಳ್ಳುವುದು ಹೀಗೆ ಲಿಖಿಸಿದ್ದರ ಮುಖ್ಯ ಉದ್ದೇಶವಾಗಿದೆ.

ಹಿಂದಿನ ಪುಟಗಳಲ್ಲಿ ಹೇಳಬೇಕೆಂದು ಮಾಡಿದ್ದನ್ನು ಇಲ್ಲಿ ಇಂತು ಪರಿ ಸಾರ ಸಂಗ್ರಹಿಸಲು ಪ್ರಯತ್ನಿಸುವೆನು :

1. ನಮ್ಮ ಸಂಸ್ಕೃತಿಯಲ್ಲಿ ಬತ್ತಲೆ ಎರಡು ರೀತಿಯಲ್ಲಿ ಪ್ರಸ್ತಾಪಿತವಾದುದ್ದನ್ನು ಕಾಣಬಹುದು. ಒಂದು, ಅರಿವು ಪೂರ್ವದ ಸ್ಥಿತಿಯ ಬತ್ತಲಾಗುವಿಕೆ. ಇದು ಸಾಂಪ್ರದಾಯಿಕ ಆಚರಣೆಯಾದ ಬತ್ತಲೆಸೇವೆ, ಕುಂಭಮೇಳ ಮುಂತಾದ್ದು ಕಡೆ ಕಾಣುವುದು. ಎರಡನೆಯದು, ಅರಿವಿನ ಅಂತಿಮ ಹಂತವಾಗಿ ಸಕಲವನ್ನು ಪರಿತ್ಯಜಿಸಿ ಬತ್ತಲಾಗುವುದು. ಅಕ್ಕಮಹಾದೇವಿ, ಜೈನ ದಿಗಂಬರರು ಇದಕ್ಕೆ ಉದಾಹರಣೆಗಳು.



ಶೂದ್ರ

2. ಅಕ್ಷರಜ್ಞಾನದಿಂದ ಬಂದ ಅರಿವೇ ಅರಿವಿನ ಅಂತಿಮ ಹಂತವಲ್ಲ ನಿಜ. ಆದರೆ ಅಕ್ಷರಜ್ಞಾನವೇ ನಮಗೆ ಅರಿವಿನ ಸಾಧ್ಯತೆಗಳನ್ನು ತೆರೆದು ತೋರಿಸುವ ಪ್ರಾಥಮಿಕ ಹಂತ. ಯಾಕೆಂದರೆ ಅಕ್ಷರಜ್ಞಾನ ಮಾತ್ರ ಸುತ್ತಲಿನ ವಿದ್ಯಮಾನಗಳನ್ನು ತಿಳಿದುಕೊಳ್ಳುವ ಸಾಧ್ಯತೆಯನ್ನು ಕೊಡುವ ಮೂಲಕ ನಮ್ಮನ್ನು ಇನ್ನೊಬ್ಬರ ಜಿಬಿಲಿಯಾಗದಂತೆ ಕಾಪಾಡುವ ಅವಕಾಶ ಕೊಡಬಲ್ಲುದು.

ಅರಿವಿನ ಆಯ್ಕೆಯಲ್ಲದ್ದು ಸೃಜನಶೀಲವಲ್ಲ: ಅದು ದೇಹ-ಮನಸ್ಸುಗಳನ್ನು ಸುತ್ತಿದಲ್ಲಿ ಸುತ್ತಿಸುವಂಥದು.

3. ಶಿವಕೋಟ್ಯಾಚಾರ್ಯನಾಗಲೀ ಬೇಂದ್ರೆಯವರಾಗಲೀ ಅರಿವಿನ ಅಂತಿಮ ಹಂತ ಯಾವುದು ಎಂಬ ಹುಡುಕಾಟದಲ್ಲಿ ತೊಡಗಿರುವವರು.

4. ದೇಹ ಮತ್ತು ಮನಸ್ಸು, ಅರಿವು ಮತ್ತು ಉಲ್ಲಾಸ ಪರಸ್ಪರ ಸಂಬಂಧಿಸಿ ಜ್ವಲಂತವಾಗಬೇಕೆಂಬುದು ಶಿವಕೋಟ್ಯಾಚಾರ್ಯನ ಮತ್ತು ಬೇಂದ್ರೆಯವರ ಮುಖ್ಯ ಕಾಳಜಿಗಳಲ್ಲೊಂದು ಎಂದು ಹಿಂದೆ ಹೇಳಿದೆನು. ಇದು ಕನ್ನಡ ಸಾಹಿತ್ಯದಲ್ಲಿ ಒಂದು ಮುಖ್ಯ ಕಾಳಜಿಕೂಡಾ ಹೌದು. ಉದಾಹರಣೆಗೆ ಶಿವರಾಮ ಕಾರಂತರ 'ಮೈ ಮನಗಳ ಸುಳಿಯಲ್ಲಿ' ಎಂಬ ಕಾದಂಬರಿಯಲ್ಲಿ ಮೈ ಅಥವಾ ಮನಸ್ಸು ಪರಸ್ಪರ ಭಿನ್ನವಾಗಿ ಉಳಿಯುವ, ತದುಕಾರಣವಾಗಿ ಮನುಷ್ಯ ಸದಾ ಅಪೂರ್ಣವಾಗಿರುವುದರ ಚಿತ್ರ ಬರುವುದು. ಅಡಿಗರ ಪ್ರಾರ್ಥನೆ ಮತ್ತು ಕೂಪಮುಂಡೂಕ, ಅನಂತಮೂರ್ತಿಯವರ ಬ್ರಾಹ್ಮಣ-ಶೂದ್ರ ಪರಿಕಲ್ಪನೆ ಹಾಗೂ ಅವಸ್ಥೆ ಕಾದಂಬರಿ, ಗಿರೀಶ ಕಾರ್ನಾಡರ ಹಯವದನ-ದೇಹ ಮತ್ತು ಮನಸ್ಸುಗಳ, ಅರಿವು ಮತ್ತು ಉಲ್ಲಾಸದ ಸಂಬಧ್ಧಿಸುವಿಕೆಯ ಬಗ್ಗೆ ಬರೆದ ಕೆಲವು ಮುಖ್ಯ ಕೃತಿಳಗು.

"I find it almost impossible to make a strong declarative statement in conversation without feeling little nagging doubts and reservations."

—HUGH PRATHER

# ಹೊಳೆಯವ್ವನ ಹಾಡು

ಹೊಳೆಯವ್ವ ಹರಿತಾಳೆ / ಮಳೆಯವ್ವ ಸುರಿತಾಳೆ

೧

ಮಳೆಗಾಲ ಬಂದಾಗ ತುಂಬ್ಕೊಂಡು ಇರತಾಳೆ
ಹೊಡ್ಡು ತೆಗ್ಗುಗಳನು ಸಮನಾಗಿ ಮಾಡ್ತಾಳೆ
ಬೇದ್ಭಾವ ಮಾಡ್ದಂಗಿ ಎಲ್ಲರಿಗೂ ಕಾಣ್ತಾಳೆ
ಪಶುಪಕ್ಷಿ ಪ್ರಾಣಗೂ ತನನೀರು ಕೊಡತಾಳೆ

೨

ಚಳಿಗಾಲ ಬಂದಾಗ ನಮ್ಮಂಗ ಆಗ್ತಾಳೆ
ಚಳಿಯಿಂದ ನಡುಗುತ್ತ ಮುದುಡ್ಯಾಗಿ ಇರತಾಳೆ
ಹಾರಾಟ ಭಾರಾಟ ಹಿಂದಿದು ಬಿಡುತಾಳೆ
ಸೀಮೆಯು ದಾಟಿದರೆ ಸಾವೆಂದು ತಿಳಿತಾಳೆ

೩

ಬೇಸಿಗೆ ಬಂದಾಗ ಸಣ್ಣಾಗಿ ಹೋಗ್ತಾಳೆ
ನಾಯಮರಿಯಂಗಾಕೆ ಕುಂಯ್ ಕುಂಯ್ ಅಂತಾಳೆ
ಭೀಕರ ಬರಗಾಲ ಬಂದಾಗ ಅಳತಾಳೆ
ಸತ್ಸತ್ತು ಹುಟ್ಹುಟ್ಟಿ ಜೀವಂತ ಉಳಿತಾಳೆ

೪

ಹಾವು ಮೀನ ಮೊಸಳೆಗಳಿಗೆಲ್ಲ ನೋಡ್ತಾಳೆ
ಕಪ್ಪೆ ಚಿಪ್ಪು ಮುತ್ತುಗಳಿಗೆಲ್ಲ ಬೆಳಸ್ತಾಳೆ
ಕರಡಿಕೋಲೆ ಕಾಗೆ ಹುಲಿಗಾಕೆ ಕರಿತಾಳೆ
ಬಂದ ಬಂದೊರಿಗೆಲ್ಲ ನೀರನ್ನು ಕೊಡುತಾಳೆ

---

ಚೆನ್ನಣ್ಣ ವಾಲಿಕಾರ, ಎಲ್.ವಿ.ಡಿ.ಕಾಲೇಜ್. ರಾಯಚೂರು.

೫

ಕೆರೆಬಾವಿ ನೀರಿಗೂ ಬರಲಿಕ್ಕೆ ಕರಿತಾಳೆ
ಹಳ್ಳಕೊಳ್ಳದ ನೀರಿಗೂ ಕೂಡವಳು ಕರೀತಾಳೆ
ಎಲ್ಲರಿಗೂ ಕರಕೊಂಡು ಸಾಗರಕೆ ನಡಿತಾಳೆ
ದಾರ್ಯಾಗ ಹೋದಾಗ ನೆಲಹಸಿರು ಮಾಡ್ತಾಳೆ

೬

ಬಿಸಿಲೀಗಿ ಒಣಒಣಗಿ ಸುಟ್ಟಾವಿ ಆಗ್ತಾಳೆ
ಮ್ಯಾಲೇರಿ ಮ್ಯಾಲೇರಿ ಮೋಡಾಗಿ ನಿಲ್ತಾಳೆ
ತಣ್ಣನ ತಂಗಾಳಿ ತಟ್ಟ್ಯಾಗ ಇಳಿತಾಳೆ
ನಮ್ಮಂಗ ಆಕೆಯೂ ಸುಖದುಃಖ ಪಡಿತಾಳೆ

೭

ಹೊಳೆಯುವ್ವನಂಥಕ್ಕ ನಮಗೆಲ್ಲಿ ಸಿಗತಾಳೆ
ಮಳೆಯುವ್ವನಂಥಕ್ಕ ನಮಗೆಲ್ಲಿ ಸಿಗತಾಳೆ
ಗಂಗಮ್ಮ ತಾಯಿ ಬಾರೆ ಗೌರಮ್ಮ ತಾಯಿ ಬಾರೆ
ನೀವಿಲ್ಲದೂರೊಳಗೆ ನಾವುಳಿಯಲ್ಲ ಕೇಳೆ

೮

ನೀಲಮ್ಮನಂಥಕ್ಕ ನಮಗೆಲ್ಲಿ ಸಿಗತಾಳೆ
ನಿಂಬೆವ್ವನಂಥಕ್ಕ ನಮಗಲ್ಲಿ ದೊರೀತಾಳೆ
ನೆಲಮುಗಿಲು ಬಂದಾಗಿ ಮಾಡ್ದಂಥ ತಾಯ್ಮೇಲೆ
ನಿಮ್ಮಿಂದ ಈ ನೆಲವು ತನ್ಕಣ್ಣು ತೆರೀತಾದೆ

೯

ನೀರವ್ವನಂಥಕ್ಕ ನೆಲದವ್ವನಂಥಕ್ಕ
ಗಾಳೆವ್ವನಂಥಕ್ಕ ಬೆಂಕೆವ್ವನಂಥಕ್ಕ
ಮುಗಿಲವ್ವನಂಥಕ್ಕ ನಮದೇಹಮಾಡುತ್ತಾ
ಜೀಂಬ್ಯಾಳ ತುಂಬ್ಯಾಳೆ ಜಗಟನ್ನು ನಡಸ್ಯಾಗೆ

— ಚೆನ್ನಣ್ಣ ವಾಲೀಕಾರ

# ಕಲಿತ ಪದಗಳು

ಒಂದರ ಮೇಲಿನ್ನೊಂದು ಸೇರಿಸಿಕೊಂಡಿರುವ ಬುದ್ಧನ ಗುಂಗುರುಳಿನಂತೆ
ಬಟಾಣಿ ಕುಡಿಗಳ ಮುಂದೊಂದು ಸೇಬು ಬಿಡು ಗಿಡಬಾಲಕ
ಬಿಟ್ಟ ಈ ಕಾಶ್ಮೀರಿ ಚೆಲುವಿನ ಕೆನ್ನೆ ಮೇಲೊಂದು ಬೊಟ್ಟಿಡು
ಸೇಬಿನ ತುದಿ ಮೇಲಿನೊಂದು ಕುಡಿಸುತ್ತಿ, ತೊಟ್ಟು ಬರದಂತೆ
ಹೊಕ್ಕುಳ ಸೀಳಿದರೆ ಮಹಾಪ್ರಾಣವಿದು 'ಕಥೆ' ಆಗುವ ಹಾಗೆ.

ಚಿಗುರು ಮೊಗ್ಗೊಡೆ ಬಿಸಿಲಿಗರಳಿ ಹೂವಾಗು, ಕಾಯಾಗುವ
ಜೀವ ಕಾಯಕವ ಬೆರಗಿಗೆ ಗಲ್ಲಕ್ಕೆ ಬೆರಳಿಟ್ಟು ಏನೆಂದು ತಿಳಿಯದೆ
ಪ್ರಶ್ನಾರ್ಥಕ ಕೊಕ್ಕೆಗಳಿಂದ ಕೆಡವಿಕೋ ಫಲಪುಷ್ಪರೂಪಿ ಅಕ್ಷರಗಳನ್ನು

ಕೆಲ ಅಕ್ಷರಗಳು ತುಂಬಾ ಸರಳ ತುಂಡು ಲಂಗೋಟಿ, ಗಾಂಧೀಜಿಯು ಚಾಳೀಸು
ಆದರೂ ತಿದ್ದಿ ತಿದ್ದಿ ಎತ್ತಿ ಬಂಡಿ ತಿರುಗದ ಜಾಡಿನಂತೆ ಮಾಡುತ್ತೀ
ಕೊಂಬು ದೀರ್ಘಗಳ ಬರೆವಾಗ ಕಾಯಿಗದರಿದರೆ, ಹುಲಿಗೆದರಿ ನೇಗಿಲೊಡನೆ
ಪೇರಿಕಿತ್ತ ಎಳಗರುವಿನಂತಾಗಿ ಬಿಕ್ಕಿ, ಉಕ್ಕಿದ ಕಣ್ಣ ಹನಿ ಅರಕಾವತಿ
ಹೊಳೆಯಾಗಿ ಆದರಲ್ಲೇ ಈಜುಗಾರನಾಗುತ್ತೀ.

ಮಾವಿನ ನೆರಳು ತುಳಸೀಕಟ್ಟೆಯ ತಾಗಿ ಸಾಲೆಗೆ ಹೊತ್ತಾಯ್ತು
ಅವ್ವ ಕೊಟ್ಟ ನೆಲಗಡಲೆ ಬೆಲ್ಲದ ಮುರುಕು ತುಂಬಿಕೊಂಡು
ಪುಟ್ಟ ಹೆಜ್ಜೆಗಳಿಟ್ಟು ಪೊದೆಗಳಿಗೆ, ಮೆದೆಯು ಎದೆ ಗೂಡುಗಳಿಗೆ ಹೋಗಿ
ಎಂದೋ ತಂದು ಒತ್ತಾಕಿದ್ದ ಕಾಡಹಲಸುಗಳ ಹುಡುಕುತ್ತೀ ಮರಿ ಕರಡಿಯಂತೆ

ಎಲ್ಲೋ ಬಿದ್ದ ಮಳೆಗೆ ಇಲ್ಲಿ ಕೆಂಪಗೆ ಹರಿವ ಹೊಳೆ
ಕೂಹೋ ಕುಹೋ ದನಿಮಾಡಿ ಅಂಬಿಗನ ಕರ
ಕೂಹೂ ಕೂಹೂರೇ ಎಂದು ಬಿದಿರ ತೆಪ್ಪದಲ್ಲಿ ತೇಲಿಬಂದಾಗ
ನಂಬಿ ಕುಳಿತುಕೋ ಹೆಚ್ಚೂ ಕಮ್ಮಿಯಾದರೆ ಕರ್ಣನಾಗುತ್ತೀ
ಗಂಗೆಯ ಮಗ ಅಂಬಿಗನೂ ಬರುತ್ತಾನಲ್ಲಾ ಭೀಷ್ಮಾಚಾರ್ಯನಂತೆ

---

ಎಲ್ಸಿ.ನಾಗರಾಜು ನಂ.97 ಮಹಡಿಯ ಮೇಲೆ, 5ನೇ ಅಡ್ಡರಸ್ತೆ, ಮಲ್ಲೇಶ್ವರಂ
ಬೆಂಗಳೂರು–560003.

ಕಟ್ಟ ಕಡೆಯು ಕ್ಷ ಕಲಿಕೆಗೆ ಕಠಿಣ, ಎಂತಹಾ ಕಠೋರತೆ ಮಗೂ !
ಎದೆಯನ್ನ ಸುಟ್ಟುಕೊಳ್ಳಬೇಡ, ಋತುಮತಿಯಾದ ಎಳೆಬಾಲೆಯಂತೆ ಆತಂಕ
ಗೊಳ್ಳಬೇಡ.

ಅಕ್ಷರ ಖಾಂಡದಡಿ ಕುಂತು ಚೆಂದ ಕಲಿ, ಮರುಗುವ ತಾಯ
ಹೊಟ್ಟೆಯಿಂದಲೇ ಹೊಂಗುಟ್ಟು ಸೋದರ ಮಾವ ತಾಯಿಗೆ ಹೇಳುವ
ಯುದ್ಧ ತಂತ್ರಾತಂತ್ರಗಳಿಗೆ, ಕಣ್ಣು ಮುಚ್ಚಿ ನೆನೆ ನೆನೆ ಏಕಲವ್ಯನನ್ನ

ಚೆಂದಾಗಿ ಕಲಿ, ಕಲಿತೆಯಾದೊಡೆ ಇನ್ನು ಕಲಿಯಲು ದೇಶ
ವಿದೇಶಗಳಿಗೆ ಹೋಗಬಹುದು ಹಕ್ಕಿ ಹೊಟ್ಟೆಯಲ್ಲಿ ಕೂತು

ಸೈಬೀರಿಯಾದಲ್ಲಿ ಕುಂತು ಈ ಮಹಾಭಾರತೀಯ ವರ್ಗಾಕ್ಷರಗಳನ್ನ
ವಾಷಿಂಗ್‌ಗನ್ನಿನ ಕೊಟ್ಟಿಗೆಯ ಹುಟ್ಟುಗುಳಿಬಿದ್ದ ಕೆನ್ನೆಗಳ ಲಿಂಕನ್‌ತಾತನ

ಸರಳತನ ಉದಾರತ್ವ, ಫರಂಗಿರಾಣಿಯ ಮ್ಯೂಜಿಯಂನಲ್ಲಿ
ಭರತಖಾಂಡವನದ ಜಿಂಕೆಯ ಚರ್ಮದಾಕಾರವಿರುವ ಭಾರತದ ವಿಸ್ತೀರ್ಣ,
ಚರ್ಮ ಬಿಚ್ಚಿದಾರ ಮಾಡಿ ಬೇಲಿ ಹಾಕುವ ಅಂಗ್ರೇಜಿ ನೈಪುಣ್ಯತೆ,
ಸಾರಂಗ ಮೃಗದ ಕವಲು ಕೊಂಬು, ರಾಜಾಧಿರಾಜ ಮಾರಾಜರ ಪುರಾತನ ನಾಣ್ಯ
ಗಳನ್ನ ಇನ್ನೂ ಏನನ್ನೆಲ್ಲಾ ಕಲೀಬಹುದು ಗೊತ್ತಾ

ಕೆನ್ನೆ ಗುಳಿಮಾಡಿ ನಗುತ್ತೀಯಪ್ಪಾ !
ತಾನು ಊರಿಕೊಂಡು ತಿರುಗಿದ ಕೋಲು ಸೈತಾ ಚಿಗುರಿಸುವ
ಗಾಂಧಿ ತಾತನ ಮುಗುದ ಮೋಹನ ನಗುವಿನ ಹಾಗೆ

ಹರೇ ಕಣ್ಣು ಮುಚ್ಚಿ, ಸಕ್ಕರೆ ತೂಗುತ್ತಿದ್ದೀಯಲ್ಲೋ ! ನಿದ್ರೆ ಬಂತಾ ?
ಏನ ಮಾಡುವುದು ಮಗು ಜಗವೆಲ್ಲಾ ಗೋಜಲು
ನಿದ್ರೆಯಲಿ ಮಾತ್ರ ಗೆಲ್ಲಬಹುದು ಕ್ಷುದ್ರತೆಗಳನ್ನ ಸಮಾಧಾನದಿಂದ.
ಕಿಟಕಿಗಳನ್ನ ತೆರೆದಿಡು. ನಿನ್ನದೇ ಇದೆಯಲ್ಲಾ ಹಾಸಿ ಹೊಯ್ಯುವಷ್ಟು
ನಿದ್ರಿಸು ಮುಗ್ಧ ಕತ್ತಲನ್ನು ಕಣ್ಕಟ್ಟಿಕೊಂಡು, ನದಿ, ಹೊಳೆ,
ಗಂಗೆ, ಅಂತರಗಂಗೆ, ತಾರೆ, ನೀಹಾರಿಕೆಗಳ ಕನಸಿಕೊಂಡು

—ಎಲ್ಸಿ.ನಾಗರಾಜು

# ಸಂಸ್ಕೃತಿ ವಿವೇಚನೆ

—ಎಸ್. ಎಸ್. ಹಿರೇಮಠ

ಮನುಷ್ಯನ ಮೆದುಳು ಈವರೆಗೂ ಪ್ರಕೃತಿ ಸೃಜಿಸಿದ ಸರ್ವೋತ್ಕೃಷ್ಟ ಭೌತವಸ್ತು ಆದರ ಕ್ರಿಯೆ, ಪ್ರತಿಕ್ರಿಯೆಗಳೆ ಭಾವನೆ, ಆಲೋಚನೆ, ಕಲ್ಪನೆ, ನೆನಪು, ಸಂಕಲ್ಪ ಇತ್ಯಾದಿ ಅಜಾತೀತಗಳು. ಈ ಎಲ್ಲ ಕ್ರಿಯಾಸರಣಿಯನ್ನು ಪ್ರಧಾನವಾಗಿ 1. ಬುದ್ಧಿ 2. ಭಾವನೆ ಎಂದು ಕ್ರೋಡಿಕರಿಸಿ ಹೇಳಲಾಗುತ್ತದೆ. ಸ್ಥೂಲವಾಗಿ ಬುದ್ಧಿ ಭಾವನೆಗಳ ಜೈವಿಕ ಸಂಯೋಗವನ್ನು ಸಂಸ್ಕೃತಿ ಎಂದು ಹೇಳಬಹುದು.

ಈ ಶತಮಾನದಲ್ಲಿ ಅತ್ಯುತ್ತಮ ಮಟ್ಟದಲ್ಲಿ ಈ ಸಂಯೋಗವನ್ನು ಸಾಧಿಸಲು ಏನೆಲ್ಲ ಅನುಕೂಲಗಳಿರುವುದೇ ನಮ್ಮ ಪೀಳಿಗೆಯ ಸುಯೋಗ. ಆದರೆ ಅದನ್ನು ಹೇಗೆ ಸಾಧಿಸಲಾಗುತ್ತಿದೆ ಎಂಬುದು ಸಾಮಾಜಿಕಾರ್ಥಿಕ ರಾಜಕೀಯ ಪ್ರಶ್ನೆಯಾಗುತ್ತದೆ.

ಮೊಟ್ಟಮೊದಲು ಪರಿಸರದಿಂದ ಪ್ರಜ್ಞೆಯು ರೂಪಣೆಯಾಗುತ್ತದೆಯೆ ಹೊರತು ಪ್ರಜ್ಞೆಯಿಂದ ಪರಿಸರವಲ್ಲ ಎಂಬುದನ್ನು ತಿಳಿದಿರಬೇಕು. ಇದನ್ನು ಅಂತರಂಗವು ಬಹಿರಂಗ ವ್ಯಾಪಾರದಿಂದ ನಿರ್ಧರಿಸಲ್ಪಡುವುದು ಅಥವಾ ಇರವಿನ ಆಧಾರದಲ್ಲಿ ಅರಿವು ರೂಪು ಪಡೆಯುವುದು ಎಂದೂ ಹೇಳಬಹುದು.

ಪರಿಸರ ಎನ್ನುವುದು ಆಯಾ ದೇಶದ, ಕಾಲದ, ಯಾವೆಲ್ಲಾ ಸಂಗತಿಗಳನ್ನು ಉದಾಹರಣೆಗೆ ಮೇಲೆ ಹೇಳಿದಂತೆ ನಿಸರ್ಗ, ಸಾಮಾಜಿಕ, ರಾಜಕೀಯ, ಆರ್ಥಿಕ ಸ್ಥಿತಿಗತಿ ಮುಂತಾದವು ಒಳಗೊಂಡಿರುತ್ತದೆ.

ಪ್ರಜ್ಞೆಯನ್ನು ಬುದ್ಧಿ-ಭಾವಗಳ ಸುಸಂಗಮ ಎನ್ನಬಹುದು.

೧. ಬೌದ್ಧಿಕ ಕಾರ್ಯವ್ಯಾಪ್ತಿಯನ್ನು ಇಂದು ಸುವ್ಯವಸ್ಥಿತವಾದ ವಿಜ್ಞಾನ ಶಾಖೆಗಳಲ್ಲಿ ವಿಭಜಿಸಲಾಗಿದೆ. ಇದು ಒಂದೆಡೆ ಪ್ರಾಕೃತಿಕ ವಿಜ್ಞಾನ ಮತ್ತು ಇನ್ನೊಂದೆಡೆ ಸಾಮಾಜಿಕ ವಿಜ್ಞಾನ ಎಂಬುದಾಗಿದೆ. ಪ್ರಕೃತಿಯ ಯಾವೆಲ್ಲಾ ಸಂಗತಿಗಳ

---

ಎಸ್ ಎಸ್. ಹಿರೇಮಠ, ಕನ್ನಡ ವಿಭಾಗ, ಬಸವೇಶ್ವರ ಗುಡಿ ಎದುರು, ಕೊಟ್ಟೂರು ರಸ್ತೆ ಹರಪ್ಪನಹಳ್ಳಿ, ಬಳ್ಳಾರಿ ಜಿಲ್ಲೆ.

ವೈಜ್ಞಾನಿಕವಾದ ತಿಳಿವನ್ನು ಪ್ರಯೋಗಗಳ ಆಧಾರದಲ್ಲಿ ಪಡೆಯಲು ಭೌತಶಾಸ್ತ್ರ, ರಸಾಯನ ಶಾಸ್ತ್ರ, ಜೀವಶಾಸ್ತ್ರ. ಪರಿಸರ ವಿಜ್ಞಾನ, ಆಕಾಶ ವಿಜ್ಞಾನ ಮುಂತಾದ ಪ್ರಾಕೃತಿಕ ವಿಜ್ಞಾನ ಶಾಖೆಗಳು ಯತ್ನಿಸಿದರೆ; ಅರ್ಥಶಾಸ್ತ್ರ, ಇತಿಹಾಸ, ಸಮಾಜ ಶಾಸ್ತ್ರ, ಮಾನವ ಶಾಸ್ತ್ರ. ರಾಜಕೀಯಶಾಸ್ತ್ರ ಮುಂತಾದವು ಮಾನವ ಸಮಾಜದ ವೈಜ್ಞಾನಿಕ ಅರಿವನ್ನು ವ್ಯವಸ್ಥಿತವಾಗಿ ಹೆಚ್ಚಿಸುವಲ್ಲಿ ನಿರತವಾಗಿವೆ. ಈ ಎಲ್ಲ ಬೌದ್ಧಿಕ ವ್ಯಾಪಾರವು ನಮ್ಮ ಪರಿಸರದ ವ್ಯವಸ್ಥಿತವಾದ, ಸುಸಂಗತವಾದ, ವೈಜ್ಞಾನಿಕ ತಿಳಿವನ್ನು ಹೆಚ್ಚಿಸಲು ನೆರವಾಗುವುದು. ವೈಜ್ಞಾನಿಕ ಕಣ್ಣೋಟವಿಲ್ಲದೆ ಇಂದು "ಸರಿಯಾಗಿ" ಬದುಕುವುದೇ ಅಸಾಧ್ಯ. ಆದರೆ ಎಷ್ಟೆಲ್ಲಾ ವಿಜ್ಞಾನವನ್ನು ಓದಿದರೂ ವೈಜ್ಞಾನಿಕ ಮನೋಭಾವವಿಲ್ಲದಿರುವುದನ್ನು ಅನೇಕರಲ್ಲಿ ಕಾಣಲು ಕಾರಣವಿದೆ. ವ್ಯವಸ್ಥಿತವಾಗಿ ವಿಜ್ಞಾನ ಶಾಖೆಗಳ ಅಭ್ಯಾಸವಿಲ್ಲದಿರುವ ಹಲವರಿಗೆ ವೈಜ್ಞಾನಿಕ ಮನೋಭಾವವಿರುವುದೂ ಕೂಡ ಆಕಸ್ಮಾತ್ ಸಂಗತಿಯಲ್ಲ. ಆದರೆ ವೈಜ್ಞಾನಿಕ ಮನೋಭಾವ ಬೆಳೆಸಿಕೊಳ್ಳಲು ಈ ಎಲ್ಲ ವಿಜ್ಞಾನ ಶಾಖೆಗಳು ಅತ್ಯವಶ್ಯಕವಾಗಿ ನೆರವು ನೀಡುತ್ತವೆ. ಮತ್ತು ಅವಕ್ಕೆ ಮೂಲವಾಗುತ್ತವೆ ಎಂಬುದಂತೂ ಸುನಿಶ್ಚಿತ. ಆದರೆ ಬಂಡವಾಳಶಾಹಿ ದೇಶಗಳಲ್ಲಿ ವ್ಯವಸ್ಥಿತವಾಗಿ ವೈಜ್ಞಾನಿಕ ಮನೊಭಾವ ಬೆಳೆಯು ದಂತೆ "ವ್ಯವಸ್ಥೆ" ಪ್ರಯತ್ನಿಸುತ್ತದೆ. ಇದನ್ನು ಹೇಗೆ ಸಾಧಿಸಲಾಗುತ್ತದೆ? ವಿಜ್ಞಾನ ಶಾಖೆಗಳನ್ನು ಅರಿತು ವೈಜ್ಞಾನಿಕ ಮನೋಭಾವ ಬೆಳೆಯದೆ ಇರಲು ಮುಖ್ಯ ಕಾರಣ ಗಳಲ್ಲೊಂದೆಂದರೆ ಇಡಿ ಪ್ರಜ್ಞೆಯನ್ನು ಸಮಗ್ರವಾಗಿ, ತೌಲನಿಕವಾಗಿ ಕ್ರೋಢಿಕರಿಸಿ ನೋಡಲಾಗದ "ಆಧ್ಯಾತ್ಮಿಕ ದೃಷ್ಟಿ" "ಬಂಡವಾಳಶಾಹಿಪರ ದೃಷ್ಟಿ" ಭೌತವಾಗಿ ತತ್ವಜ್ಞಾನೀಯ ದೃಷ್ಟಿಕೋನ ಮಾತ್ರವೇ ಮೂಲಭೂತವಾಗಿ ವೈಜ್ಞಾನಿಕ ಮನೋ ಭಾವಕ್ಕೆ ತಳಹದಿಯಾಗಿದೆ. ಮತ್ತು ಭೌತವಾದಿ ತತ್ವಜ್ಞಾನವು ಅಥವಾ ದ್ವಂದ್ವ ಮಾನ ಭೌತಿಕವಾದವು ಯಾವೆಲ್ಲಾ ವೈಜ್ಞಾನಿಕ ಶೋಧನೆಗಳ ಆಧಾರದಲ್ಲಿಯೇ ಆಶ್ರಯದಲ್ಲಿಯೆ ಪರಿಪಕ್ವಗೊಂಡಿದೆ. ಪ್ರಜ್ಞೆಯ ಇಡಿಯನ್ನು ಅರ್ಥೈಸಿ, **ಜಾಗತಿಕ ಕಣ್ಣೋಟ ಕೊಡುವುದೇ ತತ್ವಜ್ಞಾನ.** ತತ್ವಜ್ಞಾನದಲ್ಲಿ 1. ಪ್ರತಿ ಗಾಮಿಯಾದ ಆಧ್ಯಾತ್ಮವಾದ 2. ಪ್ರಗತಿಪರವಾದ ಭೌತವಾದಗಳೇ ಇಂದು ಜಗತ್ತಿನಲ್ಲಿ ನಿರ್ಣಾಯಕವೂ. ಅತ್ಯಂತಿಕವೂ ಆಗಿವೆ.

೨. ಪ್ರಜ್ಞೆಯ ಇನ್ನೊಂದು ಭಾಗವಾದ 'ಭಾವನೆ'ಯ ಕಾರ್ಯವ್ಯಾಪ್ತಿಗೆ ಬಂದರೆ ಅಲ್ಲಿ 'ಕಲೆ' ಎಂಬ ಹೆಸರಿನಿಂದ ಕರೆಯುವ ಚಟುವಟಿಕೆ ನಡೆಯುವುದನ್ನು ಗುರುತಿಸುತ್ತೇವೆ. ಚಿತ್ರ, ಸಂಗೀತ, ಶಿಲ್ಪ, ನೃತ್ಯ. ಸಾಹಿತ್ಯ, ಕಲಾಪ್ರಕಾರಗಳು, ಭಾವನಾ ಪ್ರಪಂಚದ ಅಭಿವ್ಯಕ್ತಿಗಳು. ಸೌಂದರ್ಯಾನುಭೂತಿ ಇದರ ತಳಹದಿ. ಪರಿಸರ ವನ್ನು ಕಲಾತ್ಮಕವಾಗಿ ಸೌಂದರ್ಯಾನುಭವದ ಸೃಜನೆಯಾಗಿ ಪುನರ್ರೂಪಿಸುವುದು ಕಲಾವಿದನ ಕೆಲಸ.

ಸೃಜನ ಶೀಲ ಕ್ರಿಯೆಗೂ, ವೈಜ್ಞಾನಿಕ ಮನೋಭಾವಕ್ಕೂ ನಿಕಟವಾದ ಸಂಬಂಧ ವನ್ನು ಸಾಧಿಸಬೇಕಾಗಿದೆ ಎಂದು ಹೇಳಬೇಕಾಗಿರುವುದೇ ಇಲ್ಲಿಯ ನನ್ನ ಮುಖ್ಯ. ಉದ್ದೇಶ. ಆಧ್ಯಾತ್ಮಿಕ ತತ್ವಜ್ಞಾನಿಯ ಕಣ್ಣೋಟವಿಟ್ಟುಕೊಂಡಿರುವ (ತನಗರಿವಿದ್ದ, ಇಲ್ಲದೆಯೇ ಸೃಜನ ಶೀಲ ಕಲಾವಿದ ಉಂಟುಮಾಡಬಹುದಾದ 'ಅಪಾಯಗಳನ್ನು' ನಾವು ಅನೇಕ ವಿಧಗಳಲ್ಲಿ ಗುರುತಿಸಬಹುದಲ್ಲವೆ? ಆತನ ಶಕ್ತಿ ಸಾಮರ್ಥ್ಯ, ಸಾಧ್ಯತೆಗಳನ್ನು ಅಲ್ಲಗಳೆಯದೆ ಈ ಮಾತನ್ನು ಹೇಳಬೇಕಾಗುತ್ತದೆ. ಅಂತೆಯೇ ಭೌತವಾದಿ ತತ್ವಜ್ಞಾನದ ಹಿನ್ನೆಲೆಯಿರುವ ಕಲಾವಿದ ಮಾತ್ರ ಪ್ರಗತಿಪರ, ಚಿರಂತನ ನಾಗಿರಬಲ್ಲ ಎಂಬುದನ್ನೂ ಆಧುನಿಕ ಜಗತ್ತಿನ ಕಲಾ ಪ್ರಪಂಚ ತೋರಿಸುತ್ತಿದೆ.

ಈ ಸಾಧ್ಯತೆಯು ಇಂದಿಕ ಯುಗದ ಸಾಧನೆಯ ಪ್ರಧಾನ ಲಕ್ಷಣವಾಗಿದೆ. ಒಟ್ಟಾರೆ ಸೌಂದರ್ಯಾನುಭೂತಿ (ಭಾವನೆ= ಕಲೆ) ಮತ್ತು ವೈಜ್ಞಾನಿಕ ಮನೋಭಾವಗಳ (ಬುದ್ಧಿ ವಿಜ್ಞಾನ) ಸುಸಂಗತವಾದ ಜೈವಿಕವಾದ, ತಾದಾತ್ಮ್ಯವನ್ನು "ಸುಸಂಸ್ಕೃತಿ" ಎನ್ನುವು ದಾದರೆ, ಇದನ್ನು ಸಾಧಿಸುವುದೇ ಮಾನವನ ಶ್ರೇಷ್ಠತೆಯಾಗುತ್ತದೆ.

ಆದರೆ ಈಗಿನ ಭಾರತದ ಪರಿಸರದ ಹಿನ್ನೆಲೆಯಲ್ಲಿ ನಮ್ಮ 'ಪ್ರಜ್ಞೆ'ಯ ಸ್ವರೂ ಪವು ನಿರ್ಧರಿಸಲ್ಪಡುವುದರಿಂದ ನಮ್ಮ ಪ್ರಮುಖ ಕಷ್ಟಗಳು ಮತ್ತು ಜವಾಬ್ದಾರಿಗಳು ಸಾಧ್ಯತೆಗಳೇನೆಂಬುದರ ಅರಿವಾದೀತು. ಭಾರತದ ಪರಿಸರ, ಜಾಗತಿಕ ಪರಿಸರದ ಪ್ರಭಾವಗಳ ಹಿನ್ನೆಲೆಯಲ್ಲಿರುತ್ತದೆಂಬುದನ್ನು ಮರೆಯ ಬಾರದು. ಇನ್ನು ಸ್ಪಷ್ಟವಾಗಿ ಹೇಳುವುದಾದರೆ ಪ್ರಜ್ಞೆ ಅಥವಾ ಸಂಸ್ಕೃತಿ ಆರ್ಥಿಕ ರಚನೆಯ ಆಧಾರದಲ್ಲಿ ನಿರ್ಧಾರ ವಾಗುವ, ರೂಪುಗೊಳ್ಳುವ, ಪ್ರಭಾವ ಬೀರುವ ಮೇಲ್‌ರಚನೆಯಾಗಿದೆ.

'ಪರಿಸರ'ದಲ್ಲಿ ನಿರ್ಧಾರಾತ್ಮಕ ಸಂಗತಿ ಎಂದರೆ ಮಾನವರ ನಡುವಿನ ಉತ್ಪಾದನಾ ಸಂಬಂಧವಾಗಿದೆ. ಇದೆ ಸಮಾಜದ ತಳಹದಿಯಾಗುವ "ಆರ್ಥಿಕರಚನೆ" ಈ ಸಂಬಂಧದ ಆಧಾರವಲ್ಲಿ ಮೇಲ್ ರಚನೆಯಾಗಿ ಸಂಸ್ಕೃತಿ ಆಕಾರ ತಾಳುವುದು, ವಿಭಿನ್ನ ವರ್ಗ-ಜಾತಿ ಸಂಬಂಧಗಳಿರುವ ವೈರುಧ್ಯಗಳಿಂದ ತುಂಬಿರುವ ಭಾರತವಲ್ಲಿ ವಿಭಿನ್ನ ಸಂಸ್ಕೃತಿಗಳಿರುವುದಕ್ಕೆ ಇದೇ ಕಾರಣವಾಗಿದೆ.

ವರ್ಗ-ಜಾತಿಗಳಿಂದ ಜಿಡ್ಡಾಗಿರುವ ಪ್ರಸ್ತುತ ಭಾರತೀಯ ಸಂದರ್ಭದಲ್ಲಿ ಮೇಲ್ ರಚನೆಯಾದ ಸಂಸ್ಕೃತಿಯ ಸ್ವರೂಪವೇನಿದೆ, ಅಲ್ಲಿ ನಮ್ಮ ಜವಾಬ್ದಾರಿಗಳೇನಿವೆ ಎಂಬ ವಿಚಾರ ತುಂಬ ಆಳವಾದ, ವ್ಯಾಪಕವಾದ ಅಭ್ಯಾಸವನ್ನು ಅಪೇಕ್ಷಿಸುವ ಪ್ರಶ್ನೆ.

ಸಧ್ಯಕ್ಕೆ ಕೆಲವು ಸೂಚನೆಗಳನ್ನು ಇಲ್ಲಿಡಬಹುದು.

೧) ಆಳುವ ವರ್ಗದ ಕೈಯಲ್ಲಿ "ಸೈದ್ಧಾಂತಿಕ ಅಸ್ತ್ರ"ವಾಗಿ ಅಂದರೆ "ಬಲಾತ್ಕಾರಕವಲ್ಲದ ಅಸ್ತ್ರವಾಗಿ", ಮೇಲ್ ರಚನೆಯಾದ "ವರ್ಗ ಸಂಸ್ಕೃತಿ" ಅಥವಾ ಯಜಮಾನ ಸಂಸ್ಕೃತಿ.

೨) ಜನಪದ, ಪ್ರಜಾಪ್ರಭುತ್ವೀಯ, ಪ್ರಗತಿಪರ ಚಳುವಳಿಗಳ ಮಧ್ಯದಿಂದ, ಬದ್ಧರಾದ ಲೇಖಕರು, ಕಲಾವಿದರು, ಚಿಂತಕರು ರೂಪಿಸುವ "ಜನತೆಯ ಸಂಸ್ಕೃತಿ".

೩) ಜನಪದರು ಪರಂಪರಾಗತವಾಗಿ ಉಳಿಸಿಕೊಂಡು, ಬೆಳೆಸಿಕೊಂಡು ಹೋಗುತ್ತಿರುವ "ಜನಪದ ಸಂಸ್ಕೃತಿ".

ಗುತ್ತೇದಾರಿಗಳ ಬಂಡವಾಳಶಾಹಿ ಭೂಮಾಲೀಕ ಶಕ್ತಿಗಳ ಜತೆ ಅಧಿಕಾರ ನಡೆಸುತ್ತಿರುವ ಸ್ವತಂತ್ರೋತ್ತರ ಭಾರತದ ಆಡಳಿತಕ್ಕೆ ವಿದೇಶಿ ಗುತ್ತೇದಾರಿಗಳ ಸಹಕಾರ ಬೆಂಬಲ ಇರುವುದರಿಂದಾಗಿ ಸಾಂಸ್ಕೃತಿಕ ಕ್ಷೇತ್ರದಲ್ಲೂ ಆಮದುಗಳಾಗಿವೆ. ಶೋಷಕ ವರ್ಗದ ಈ ಸಂಸ್ಕೃತಿಯನ್ನು ಸಮೂಹ ಮಧ್ಯಮಗಳು, ಶಿಕ್ಷಣರಂಗ, ಮತ್ತು ಬೇರೆ ಬೇರೆ ಮಾಧ್ಯಮಗಳು ವ್ಯವಸ್ಥಿತವಾಗಿ ಪ್ರಸಾರ ಮಾಡುತ್ತ ದುಡಿಯುವ ಜನ ಕೋಟಿಯ ಐಕ್ಯ-ಹೋರಾಟವನ್ನು ಒಡೆಯಲು ಮುರಿಯಲು ಯತ್ನಿಸುತ್ತವೆ. ಇದು ಬಹು ಸೂಕ್ಷ್ಮವಾಗಿ, ಅಮಾಯಕವಾಗಿ, ನಡೆಯುತ್ತಿರುವ ಧಂಧೆ. ಈ ಅಪಾಯ ಕಾರಿಯಾದ, ಜೀವವಿರೋಧಿಯಾದ, ಅಪ್ರಜಾಪ್ರಭುತ್ವೀಯ, ಪ್ರತಿಗಾಮಿ ಯಜಮಾನ ಸಂಸ್ಕೃತಿಯಲ್ಲಿ ಹಾಲಿವುಡ್ ಆಮದು (ಉದಾ: ಕ್ಯಾಬರೆ, ಡಿಸ್ಕೊ, ರಜನೀಶ್, ಮಹೇಶ್ ಮುಂತಾದವರು) ಪುರಾತನ ಭಾರತದ ಕೊಳೆತ ಅವಶೇಷಗಳಿರುವುದು ಲಕ್ಷಣವಾಗಿದೆ. ಇದೆಲ್ಲವನ್ನು ಮಾನವೀಯ ಮೌಲ್ಯಗಳಲ್ಲಿ ಪ್ರೀತಿಯಿರುವವರು ವಿರೋಧಿಸಬೇಕಾಗಿದೆ.

ಪ್ರಜಾಸತ್ತೆ, ಜಾತ್ಯಾತೀತತೆ, ಸ್ವತಂತ್ರ, ಸಮಾನತೆ, ಪ್ರಗತಿ ಶೀಲತೆ, ಮುಂತಾದ ಚಿರಂತನ ಮಾನವೀಯ ಮೌಲ್ಯಗಳನ್ನು ಬದುಕುವ ಅದಕ್ಕಾಗಿ ಹೋರಾಡುವ ಜನತೆಯ ಮಧ್ಯೆ ಹುಟ್ಟಿ ಬರುವ ಜನತೆಯ ಸಂಸ್ಕೃತಿಯ ಹರಿಕಾರರಾಗಲು ಅಸಂಖ್ಯ ಜವಾಬ್ದಾರಿಗಳಿವೆ.

ಮಾನವ ಕುಲ ಸೃಜಿಸುತ್ತ ಬಂದ ಎಲ್ಲಾ ಶ್ರೇಷ್ಠವಾದುದರ ಸುಂದರವಾದುದರ ವಾರಸುದಾರರಾಗುತ್ತವೆ. ಜನಪದ ಮತ್ತು ವರ್ಗ ಸಂಸ್ಕೃತಿಗಳ ಜೀವಪರ ಆಶಯ ಗಳನ್ನು ಉಳಿಸಿಕೊಳ್ಳುತ್ತ ಜನತೆಯ ಸಂಸ್ಕೃತಿ ಬೆಳೆಯಬೇಕು. ಈ ಸಂಕೀರ್ಣ ಪ್ರಕ್ರಿಯೆಯಲ್ಲಿ ನಮ್ಮ ಅಳಿವು ಉಳಿವಿನ ಪ್ರಶ್ನೆ ಮತ್ತು ಜನತೆಯ ಪ್ರಜಾಸತ್ತಾತ್ಮಕ ಕ್ರಾಂತಿಕಾರಿ ಕಾರ್ಯಾಚರಣೆಯನ್ನೇ ಅವಲಂಬಿಸಿದೆ. ●

# ನಿರೀಕ್ಷೆ

ಏನೇನೋ ಮೂಡತಾವ
ಮನಸಿನಾಗ ಕನಸಂತೆ
ಎಚ್ಚರಾಗೆ ಕುಚ್ಚಿ ಹೋಗತ್ಯಾವ.

ಬಚ್ಚಲಲ್ಲಿಯು ಹುಳುವಿನಂತೆ
ಮಿಂಜಿ ಮಿಂಜೀ ಮಿನುಗುತಾವ,
ಕಜ್ಜಿ ಕಡಿತದ ಹುಳುಕು ಹಿಡಿದಂತೆ.

ಆಜುಬಾಜು ಇಲ್ಲದಾಗ
ನಾಜುಕೀಲೇ ಮೂಡಿಬಂದು,
ನೂರು ಚಂದ್ರರ ಬೆಳಕ ಹರಿಸ್ಯಾವ;
ತಾನನ್ನಾನ ರಾಗವಿಲ್ಲದ ಹಾಡವ ಹಾಡ್ಯಾವ.

ಜಡೀ ಇಲ್ಲದ ಹೆಣ್ಣ ಅಪ್ಪಿ
ಹೆಡೀ ಇಲ್ಲದ ಹಾವಕಚ್ಚಿ
ರುಚೀ ಇಲ್ಲದ ಉಣಿಸ ಬಡಿಸ

ಕಾರ್ಗತ್ತಲ ರಾತ್ರಿಯೊಳಗ
ಬೆಳ್ಳಿ ಚುಕ್ಕಿ ಮಿನುಗಿದಾಂಗ
ಥಳ್ಳಂತ ಹಾರಿಬರುತಾವ
ಚಣದೊಳಗೆ ಸುಳಸುಳ್ಳೆದೆವ್ವವಾಗ್ಯಾವೆ.

ಹಸುಗೂಸಿನ ನಗುಕೇಳತಾವ,
ಕಿವಿಯಾಗಿಸೆ ಜೋಗಪ್ಪನ ತಂತಿಮಿಡಿತಾವ;
ಬ್ಯಾಡಂದರು, ಬೇಕಿಲ್ಲದ ಕಣಿಯ ಹೇಳ್ಯಾವ

ಸುತ್ತ ಮುತ್ತಿನ ಕಾಡೊಳಗೆ
ಕ್ಯಾದಗಿ ಹೂವಿನ ನಾತ
ಗಪ್ಪಂತ ಮೂಗು ಹೊಗತಾವ
ಜೊತೆ ಜೊತೆಗೆ ಮಿಡಿನಾಗರ ಎಡಿ ಬಡಿತಾವ

ಏನೇನೋ ಮೂಡತಾವ
ಮನಸಿನಾ ಗ ಕನಸಂತೆ
ನನಸಾಗದೆ ಒಂಟಿ ಉಳಿಸ್ಯಾವ.

—ರಾಜಶೇಖರ ಹನುಮಲಿ

ರಾಜಶೇಖರ ಹನುಮಲಿ, ನಂ. 25 ತರಳ ಬಾಳು ನಗರ, ಸಿರಿಗೆರೆ 577 541 ಚಿತ್ರದುರ್ಗ ಜಿಲ್ಲೆ

# ಒಂದು ವಿರಹಗೀತೆ

ಕನಸಿನ ಸಂಗೀತ ಯಾರ ಅಧೀನವೊ
ಅಳಿಸಿ ನಗಿಸುತ ಹೋದವೋ
ತೊಟಿನ ಅಡಿಯಲ್ಲಿ ಹರಿದ ನೀರಿನ ಹಾಗೆ
ಕಳೆದ ಕಾಲವು ಬಾರವೋ.

ಅರಳು ಮಲ್ಲಿಗೆ ಮಂಟಪ
ಹಾಸುಗಲ್ಲಿನ ಹಾಸಿಗೆ
ಕುಸುಮ ಬಾಣವು ಸೋಕಿ ಕಂಪಿಸುತಿರುವಂಥ
ಅಚ್ಚುಮೆಚ್ಚಿನ ಅಚ್ಚು ಗೊಂಬೆಯ ಸಿರಿಹುಚ್ಚು
ಅಮೃತಗರೆಯುವ ಕೊಳಲು

ಹುಡುಗಿ ಸತ್ತಾಳೆಂದು ಕರುಣೆಯ ಮಳೆಗರೆದು
ನೆತ್ತಿಯ ಬೆಳುದಿಂಗಳು—ಸುರಿದಿತ್ತು
ನೆತ್ತಿಯ ಬೆಳುದಿಂಗಳು.

ಹಸ್ತಿದಂತದ ಮಂಚವೋ
ರಾಗ ತಾಳದ ಮಿಂಚ
ಹಾಡಿನ ಒಳ ಸಂಚ
ಪ್ರಾಯ ಪ್ರಪಂಚವಿದೂ—ವಿರಹದ
ಪ್ರಾಯ ಪ್ರಪಂಚವಿದು.

ಸಡಗರದ ಕಡಲೀಸಿ ಬಯಲ ಬೆಳಕಿನ ಮುದ್ದು
ಉಚ್ಛ್ವಾಸದಂಥ ಪ್ರೀತಿ
ನಿಶ್ವಾಸದಂಥ ನೆನಪು
ದೃಷ್ಟಿಕೆ ದೆಸೆಬರುವ ಹಾಗೆ ನೀ ಬಾಯೆಂದು
ಬಾಯೂರಿ ಕುಸಿಯುವವಳೊ
ಕೈ ಮಾಡಿ ಕರೆಯುವಳೊ

—ವೀಚಿ

---

ವಿ. ಚಿಕ್ಕವೀರಯ್ಯ, ಚಿಕ್ಕವೀರಯ್ಯನ ಪಾಳ್ಯ, ತುಮಕೂರು.

# ದೇವ ಕೃಪೆ

ಗುಂಡ ತಿಂಡಿ ತಂದನು
ದೇವರೆದುರು ಇಟ್ಟನು

ಕಡ್ಡಿ ಹಚ್ಚಿ ಕಣ್ಣು ಮುಚ್ಚಿ
ಧ್ಯಾನಕೆಂದು ಕುಳಿತನು

ಕಳ್ಳಬೆಕ್ಕು ಬಂದಿತು
ತಿಂಡಿಯನ್ನು ತಿಂದಿತು

ಗುಂಡ ಧ್ಯಾನ ಮುಗಿಸಿದ

ಖಾಲಿ ತಟ್ಟೆ ಕಂಡನು
ದೇವ ಕೃಪೆ ಎಂದನು !

ದಿನವೂ ಹೀಗೆ ನಡೆಯಿತು
ಬೆಕ್ಕು ಮರಿಯು ಹಾಕಿತು

ಧ್ಯಾನ ಮುಂದುವರಿಯಿತು
ನೈವೇದ್ಯವೂ ಹೆಚ್ಚಿತು !

—ಶಿವರಾಂ ಪೈಲೂರು,

---

ಶಿವರಾಂ ಪೈಲೂರು, ಚೊಕ್ಕಾಡಿ ಅಂಚೆ : ಕುಕ್ಕುಜಡ್ಕ ಸುಳ್ಯ, ದ.ಕ.574212

ಓದಿ : ವಾಲ್ಮೀಕಿ ತೂಕಡಿಸಿದಾಗ

—ಲೇಖಕರು : ಗೌರೀಶ ಕಾಯ್ಕಿಣಿ

# ಜಪಾನ್ ಕಲಾವಿದ ‘ಹೊಕುಸೇ’ ವಿನ ಮಾಂತ್ರಿಕ ಕೈಚಳಕ

—ಪಿ.ಆರ್. ತಿಪ್ಪೇಸ್ವಾಮಿ

೧೮೦೪ರಲ್ಲಿ ಬೇಸತ್ತು ಬವಣೆಗೊಂಡಿದ್ದ, ಸುಮಾರು ನಲವತ್ತು ವರ್ಷ ವಯಸ್ಸಿನ ಜಪಾನಿನ ಸುಪ್ರಸಿದ್ಧ ಕಲಾವಿವ ತನ್ನ ಕಲಾಕೃತಿಗಳತ್ತ ದೃಷ್ಟಿಯನ್ನು ಸೆಳೆಯಲು ಒಂದು ನಾಟಕೀಯವಾದ ಅಕರ್ಷಣೆಯನ್ನು ಅದರಲ್ಲಿ ಅಳವಡಿಸಲು ಯತ್ನಿಸಿದ. ಈ ಪ್ರಕಾರ ಈಡೋ (ಈಗಿನ ಟೋಕಿಯೋ) ನಗರವ ಒಂದು ದೇವಾಲಯದ ಮುಂದೆ ವಿಶಾಲವಾದ ಪ್ರದೇಶವನ್ನು ಆರಿಸಿಕೊಂಡು ಜಪಾನಿನಲ್ಲಿಯೇ ಅತ್ಯಂತ ಹಿರಿಯ ಪ್ರಮಾಣದ ಚಿತ್ರವನ್ನು ಬಿಡಿಸತೊಡಗಿದ.

ಶಿಲೆಗಳ ಆಧಾರದಿಂದ ಒಂದಕ್ಕೊಂದು ಅಂಟಿ ತೂಕವಾಗಿಯೂ ಮಂದವಾಗಿಯೂ, ಇದ್ದ ಸುಮಾರು ೨೨೫೦ ಚ.ಅಡಿ ಅಗಲದ ದೊಡ್ಡ ಕಾಗದವೊಂದನ್ನು ತೂಗು ಬಿಟ್ಟಿದ್ದನು. ಅದರ ಒಂದು ತುದಿಯನ್ನು, ಪೂರ್ಣಗೊಂಡಾಗ ಅದನ್ನು ಜಗ್ಗಿಸಿ ಮೇಲೆ ಎಳೆಯಲು ಸಹಕಾರಿಯಾಗುವಂತೆ ಓಕ್ ಮರದ ತುಂಡೊಂದಕ್ಕೆ ಬಿಗಿದು ಕಟ್ಟಿದ್ದನು. ಅನಂತರ ದೊಡ್ಡ ಬಾನಿಯಲ್ಲಿ ಶಾಯಿಯನ್ನು, ತೊಟ್ಟಿಗಳಲ್ಲಿ ಬಣ್ಣವನ್ನು ಅಳವಡಿಸಿಕೊಂಡು, ಪೊರಕೆಗಳನ್ನೂ, ಒರಸುವ ಕೋಲುಗಳಿಗೆ ಕಟ್ಟಿದ ಬಟ್ಟೆಯನ್ನು ಸಿದ್ಧಪಡಿಸಿಕೊಂಡನು. ತನ್ನ ಉಡಿಗೆಯ ನೆರಿಗೆಗಳನ್ನು ಸೊಂಟದ ಮೇಲಕ್ಕೆ ಬಿಗಿದು ಕಟಿ ಪಾವರಕ್ಷೆಗಳನ್ನು ಎಸೆದು ಆ ಅಗಲವಾದ ಕಾಗವದ ಎದುರು ಜಪಾನಿನ ಅತ್ಯಂತ ಪ್ರಿಯ ವ್ಯಕ್ತಿಯಾದ ‘ಧರೂಮ’ ನ ವ್ಯಕ್ತಿಚಿತ್ರದ ಬಾಹ್ಯ ರೇಖೆಗಳನ್ನು ರಚಿಸಲು ಅತ್ತಇತ್ತ ಹಿಂದೆಮುಂದೆ ಓಡಾಡತೊಡಗಿದನು. ಈ ಧರೂಮ ಮಾನವ ಮತ್ತು ಪ್ರಪಂಚದ ಸ್ವಭಾವದ ಬಗೆಗೆ ಅತ್ಯಂತ ದೀರ್ಘಕಾಲ ತನ್ನ ತೋಳುಗಳೇ ಬಾಡಿ ಹೋಗುವಂತೆ ಧ್ಯಾನಚಿತ್ತನಾಗಿ ಕುಳಿತಂಥ ಮಹಾವ್ಯಕ್ತಿ.

ಪ್ರಚಂಡವಾಗಿ ಅವ್ಯಾಹತವಾಗಿ ಅನಿರ್ದಿಷ್ಟರೇಖೆಗಳನ್ನು ಬಿಡಿಸುತ್ತ ಉತ್ಸಾಹ ಭರಿತನಾಗಿದ್ದ ಕಲಾವಿದನಿಗೆ ಸೋಜಿಗಪಡುತ್ತ ಆ ದೇವಾಲಯ ಜನರಿಂದ ತುಂಬಿ ಹೋಯಿತು. ಸಂಜೆಯ ವೇಳೆಗೆ ಎಲ್ಲರೂ ಓಕಿನ ತೊಲೆಯನ್ನು ಹಗ್ಗಗಳಿಂದ ಎಳೆದ ಸರಿಪಡಿಸುವಲ್ಲಿ ಧರೂಮನ ಸುಮಾರು ಆರವತ್ತು ಅಡಿಎತ್ತರದ ವಿಶಾಲ ಪ್ರಮಾಣದ

---

ಪಿ. ಆರ್. ತಿಪ್ಪೆಸಾಮಿ, 173 ಆರ್. ಎ. ರಸ್ತೆ, ಮೈಸೂರು-570 124.

ವ್ಯಕ್ತಿಚಿತ್ರ ಎದ್ದು ತೋರಿತು. ಒಂದು ಕುದುರೆ ಸುಲಭವಾಗಿ ನಡೆದು ಹೋಗುವಷ್ಟು ವಿಶಾಲವಾದ ಬಾಯಿಯನ್ನು ಆ ದೈತ್ಯ ಸನ್ಯಾಸಿ ವ್ಯರ, ಚಿತ್ರ ಪಡೆದಿತ್ತೆಂದು ಹೇಳಲಾಗಿದೆ.

ಕಲಾವಿದ ಕಟ್ಸುಷಿಕ ಹೊಕುಸೇ ತನ್ನ ಉದ್ದೇಶವನ್ನು ಸಾರ್ಥಕಪಡಿಸಿಕೊಂಡಿದ್ದ. ಅವನ ವಿಷಯ ಎಲ್ಲೆಲ್ಲಿಯೂ ಹರಡಿಹೋಯಿತು. ಅಷ್ಟಕ್ಕೇ ತೃಪ್ತನಾಗದೆ ಅವನು ಒಂದು ಸಾಧಾರಣ ಕುಂಚದಿಂದಲೇ ಭೂತಕನ್ನಡಿಯಲ್ಲಿ ಮಾತ್ರನೋಡಲು ಸಾಧ್ಯವಾಗುವಂಥ ಎರಡು ಗುಬ್ಬಚ್ಚಿಗಳ ಪುಟ್ಟ ಚಿತ್ರವನ್ನು ಬಿಡಿಸಿದ. ಈ ಅದ್ಭುತಗಳ ವಿಷಯ ರಾಜ್ಯ ಸಭೆಯನ್ನು ಮುಚ್ಚಿ ಹೋಗುಸೇ ತನ್ನ ಅಸಾಧಾರಣ ಶಕ್ತಿಯನ್ನು ಅಲ್ಲಿ ಪ್ರದರ್ಶಿಸುವ ಅವಕಾಶ ದೊರೆಯಿತು. ಕಾಗದದಲ್ಲಿ ಒಂದು ಬಾಗಿಲಿನ ಆಕೃತಿಯನ್ನು ಬಿಡಿಸಿ ಅವಕ್ಕೆ ನೇರಳೆಯ ಬಣ್ಣವನ್ನು ಬಳಿದು ತನ್ನ ಕೌಶಲ್ಯವನ್ನು ಮೆರೆಯುವ ಪ್ರಯತ್ನದಲ್ಲಿ ತೊಡಗಿದ. ಅನಂತರ ಒಂದು ಹುಂಜವನ್ನು ಹಿಡಿದು ಅದರ ಕಾಲುಗಳನ್ನು ಕೆಂಪು ಪಾಯಿಯಲ್ಲಿ ಅದ್ದಿ ಅದನ್ನು ಆ ಅಗಲವಾದ ಕಾಗದದ ಬಾಗಿಲಿನ ಮೇಲೆ ಬಿಡತೊಡಗಿದ. ಇದರ ಹೆಜ್ಜೆಯ ಗುರುತುಗಳು ಕೆಂಪುಮ್ಯಾಪಲ್ ಎಲೆಗಳಾಕಾರವನ್ನು ಹೋಲಿದವು. ಅದನ್ನು ಕಂಡ ಹೊಕುಸೇ "ನೀಲಿಯ ಟಾಷ್ಟೇ ನದಿಯ ಮೇಲಿನ ಶರತ್ ಕಾಲದ ಎಲೆಗಳು" ಎಂದು ಸಂಭ್ರಮದಿಂದ ಕೂಗಿಕೊಂಡನು.

ನಿಜವಾಗಿ ಹೊಕುಸೇ ಒಬ್ಬ ಅತಿಜಾಗರೂಕನಾದ ಶ್ರಮಸಹಿಷ್ಣುವಾದ ಕಲಾವಿದ. ಚಿತ್ರಕಲೆಯಲ್ಲಿ ಕಾಗದದ/ಮೇಲೆ ತನ್ನ ಕಲಾಕೃತಿಗಳನ್ನು ಬಿಡಿಸುವ ಮೊದಲು ಅತ್ಯಂತ ಎಚ್ಚರಿಕೆಯಿಂದ ಪ್ರಯೋಗಿಕ ಅಭ್ಯಾಸಗಳನ್ನು ನಡೆಸುತ್ತಿದ್ದನು. ಜಪಾನಿನ ಅತ್ಯಂತ ಪ್ರಸಿದ್ಧನಾದ ಹಾಗೂ ಜನಪ್ರಿಯನಾದ ಕಲಾವಿದನಾಗಿ ಅವನು ಬೆಳಕಿಗೆ ಬಂದ. "ಉರೆಯೋ-ಎ" ಎಂಬ ಕಲಾ ಸಂಪ್ರದಾಯದಲ್ಲಿ ಅದೃಷ್ಟಶಾಲಿಯಾಗಿಯೂ ಇವನೇ ಕೊನೆಯವನಾಗಿಯೂ ಹೆಸರ ಗಳಿಸಿದವನು. ದೈನಂದಿನ ಜೀವನವನ್ನು ಮರದ ಹಲಗೆಗಳ ಮೇಲೆ ಚಿತ್ರಿಸುವ ವಿಧಾನವೆಂದು ಸಾಮಾನ್ಯ ಬಳಕೆಯಲ್ಲಿ ಈ ಸಂಪ್ರದಾಯದ ಹೆಸರು ನಿಲ್ಲುತ್ತದೆ. ಸಾವಿರಾರು ವರ್ಷಗಳ ಒಂದು ಸಂಪ್ರದಾಯದಲ್ಲಿ ಪರಿಣತನಾಗಲೂ ಹೊಸಮರದ ತುಂಡುಗಳ ಮೇಲೆ ಕಲಾಕೃತಿಗಳನ್ನು ಬಿಡಿಸಲೂ, ತಂತ್ರ ಹಾಗೂ ವರ್ಣದಲ್ಲಿಯೂ ಮಾನವ ಕೃತಿಗಳನ್ನು ಮುಚ್ಚಿ ಬಿಡುವಂತೆ ನೈಸರ್ಗಿಕ ಚಿತ್ರಗಳು ಆಕ್ರಮಿಸಿಕೊಳ್ಳುವಂತೆಯೂ ಯಥಾವತ್ತತೆಯನ್ನು ಸಾದಿಸಿ, ಈ ಮೂಲಕ ಅವರ ಪೂರ್ಣಪ್ರಭಾವವು ಕ್ರಾಂತಿಕಾರಕವಾಗುವಂತೆಯೂ ವಿಶೇಷ ಪರಿಶ್ರಮವನ್ನು ಪಡೆಯಲು ಅವನು ಹವಣಿಸಿದ್ದ.

ಕೌತುಕಕಾರಿಯೆಂದರೆ, ಸಾಮಾನ್ಯವಾಗಿ ಅನೇಕರು ಮರಣಹೊಂದಿಯೇ ಅಥವಾ ಕೆಲಸದಿಂದ ನಿವೃತ್ತರಾಗಿಯೇ ಇರುವಂಥ ಇಳಿವಯಸ್ಸಿನಲ್ಲಿ ಇದನ್ನು ಅವನು ಸಾಧಿಸಿದ್ದು. ಈಗ ಪ್ರಪಂಚವು ಅತ್ಯಂತ ವಿಶ್ವಾಸದಿಂದ ಕೂಡಿಟ್ಟುಕೊಂಡಿರುವ ವರ್ಣಮುದ್ರಣ ಗಳಲ್ಲಿ ಅನೇಕವು ಅವನ ಎಂಭತ್ತನೆಯ ವಯಸ್ಸಿನಲ್ಲಿ ರಚಿಸಿದಂಥವು. ತಾನು ಎಂಭತ್ತೊಂಬತ್ತನೆ ವಯಸ್ಸಿನಲ್ಲಿ ತೀರಿಕೊಳ್ಳುವ ಮುನ್ನವೂ ಸಹ ಅವನು ಕಷ್ಟ ಸಾಧ್ಯವಾದ ಕಲಾಕೃತಿಯ ರಚನೆಯಲ್ಲಿ ತೊಡಗಿದ್ದನು.

ಅವನೊಬ್ಬ ಅದ್ಭುತ ಕಾರ್ಯಪಟು ಸುಮಾರು ಮೂವತ್ತು ಸಾವಿರಕ್ಕೂ ಹೆಚ್ಚಾಗಿ ಚಿತ್ರಗನ್ನು ರಚಿಸಿದ ಖ್ಯಾತಿ ಅವನದು. ಹಾಗೆಯೇ ತನ್ನ ಜೀವಿತ ಕಾಲದಲ್ಲಿ ಸುಮಾರು ತೊಂಬತ್ತೂರು ಬೇರೆ ಬೇರೆ ಮನೆಗಳಲ್ಲಿ ವಾಸಿಸಿ, ಅವುಗಳನ್ನು ಶುಚಿಗೊಳಿಸಲಾಗದಷ್ಟು ಮಲಿನಗೊಳಿಸಿಯೋ ಅಥವಾ ತೀರಿಸಲಾಗದಷ್ಟೋ ಬಾಡಿಗೆಯನ್ನು ಹೊರಿಸಿಯೋ ಕೈಬಿಡುತ್ತಿದ್ದವನು ಹಣವನ್ನು ಅಸೊಯೆಯಿಂದ ಕಂಡವನಾದುದರಿಂದ ತನ್ನ ಇಡೀ ಜೀವನವನ್ನು ಬಡತನದಲ್ಲಿಯೇ ಕಳೆಯಬೇಕಾಯಿತು.

ಎಣಿಸಲಾಗದ 'ಎನ್' ನಾಣ್ಯಗಳು ತುಂಬಿದ ತನ್ನ ಕಿಸೆಗಳನ್ನು ಅತ್ತಿತ್ತ ಅಲ್ಲಾಡಿಸುವುದರಲ್ಲಿಯೇ ಅವನು ವ್ಯಾಪಾರಿಗಳಿಗೆ ತನ್ನ ಬಾಕಿಯನ್ನು ತೀರಿಸಿಬಿಡುತ್ತಿದ್ದ ಸುಮಾರು ಐವತ್ತಕ್ಕೂ ಹೆಚ್ಚು ಉಪನಾಮಗಳನ್ನು ಇಟ್ಟುಕೊಂಡು, ಒಂದೊಂದು. ಹೊಸ ಹೊಸ ಕಲಾತಂತ್ರದಿಂದ ಆ ಹೆಸರೂ ಪ್ರಖ್ಯಾತವಾಗುತ್ತಿದ್ದಾಗ, ಅದನ್ನು ತೊರೆದು ಮತ್ತೊಂದಕ್ಕೆ ಹಾರಿಬಿಡುತ್ತಿದ್ದನು. ಆದರೆ, ಅವನ ಇತ್ತೀಚಿನ ಪ್ರಮಾಣ ಸಿದ್ಧವಾದ ಹೊಕುಸೇಯ ಶೈಲಿಮಾತ್ರ ಹೆಚ್ಚು ಪ್ರಶಂಸಿಸಲ್ಪಟ್ಟಿದೆ. ಶಕ್ತಿಯುತವಾದ, ಮನೋಹರವಾಗಿ ನಿರ್ವಹಿಸಲ್ಪಟ್ಟ ಸ್ವಲ್ಪ ವಿಕೃತವಾದ ಬಗೆಯೇ ಅವನಶೈಲಿಯ ಮೂಲ. ಅವನ ಪೂರ್ವ ವಯಸ್ಸಿನಲ್ಲಿ ಟೋಕಿಯೋವಿನಲ್ಲಿ ಒಬ್ಬ ಬಡಪಾಯಿ ಹುಡುಗನಾಗಿದ್ದು ತನ್ನ ಹತ್ತೊಂಬತ್ತನೆಯ ವಯಸ್ಸಿನಲ್ಲಿ ಮರಗೆಲಸ ಕಲಿತನು. ಹಾಗೆಯೇ ಕ್ರಮೇಣ ಒಬ್ಬ ಪುಸ್ತಕ ವ್ಯಾಪಾರಿಯಾಗಿಯೂ. ಬೀದಿ ಬೀದಿಗಳಲ್ಲಿ ಕ್ಯಾಲೆಂಡರುಗಳನ್ನು ಹೊತ್ತು ಮಾರುವವನಾಗಿಯೂ, ಕಾಗದದ ವ್ಯಾಪಾರಿಯಾಗಿಯೂ, ಬ್ಯಾನರುಗಳ ಚಿತ್ರಕಾರನಾಗಿಯೂ ಆಗಿ ಜೀವಿಸುತ್ತಿದ್ದವನು. ಅವನು ಎರಡು ಬಾರಿ ಲಗ್ನವಾಗಿ ತನಗೆ ಹೆಚ್ಚು ಹೊರೆಯಾಗಿ ಪರಿಣಮಿಸಿದ ಅನೇಕ ಮಕ್ಕಳನ್ನೂ ತನ್ನ ದುಂದು ವೆಚ್ಚದಿಂದ ಇವನನ್ನು ದಿವಾಳಿಗೇಳಿಸಿದ ಒಬ್ಬ ಮೊಮ್ಮಗನನ್ನೂ ಪಡೆದಿದ್ದನು.

ಅವನ ಒಂದೇ ಒಂದು ಪ್ರೀತಿಯ ವಸ್ತು ಅವನ ಅದೃಷ್ಟಶಾಲಿ ಮಗಳು ಸೋಯಿ ಯುರೆಯೋಯು ಕಲೆಯಲ್ಲಿ ನಿಪುಣೆಯರಾಗಿ ತಮ್ಮ ಸ್ಮಾರಕಗಳನ್ನು

ಉಳಿಸಿಕೊಂಡ ಕೆಲವೇ ಜಪಾನಿವನಿತೆಯರಲ್ಲಿ ಒಬ್ಬಳು. ತನ್ನ ತಂದೆಯನ್ನು ಅವಳು ಸದಾ ನೋಡಿಕೊಳ್ಳುತ್ತಿದ್ದವಳು. ಒಂದು ದಿನ ಅವನ ಎಂಭತ್ತನೆ ವಯಸ್ಸಿನಲ್ಲಿ ಚಿತ್ರ ಫಲಕೆಯ ಬಳಿ ಕುಳಿತು ಅಳುತ್ತಿದ್ದ. ತಂದೆಯ ಬಗ್ಗೆ ಮಗಳು ಆಗ ಹೇಳಿದ ಮಾತು ಅಚ್ಚರಿಯನ್ನುಂಟು ಮಾಡುತ್ತದೆ. 'ಆ ವಯಸ್ಸಿನಲ್ಲಿಯೂ ಕೂಡ ತನ್ನ ಎಲ್ಲ ಅಭ್ಯಾಸ ಹಾಗೂ ಶ್ರಮಗಳ ಫಲವಾಗಿಯೂ ಅವನು ವಸ್ತುಗಳನ್ನು ಅವುಗಳು ಇದ್ದಂತೆಯೇ ಚಿತ್ರಿಸುವ ಕೈಚಳಕವನ್ನು ಪಡೆದುಕೊಳ್ಳಲಿಲ್ಲವಲ್ಲಾ ಎಂಬ ವ್ಯಥೆಯಲ್ಲಿ ಕೊರಗುತ್ತಿದ್ದನಂತೆ.' "ದೇವರು ನನಗೆ ಇನ್ನೂ ಹತ್ತು ವರ್ಷಗಳನ್ನು ಅಥವಾ ಐದೇ ವರ್ಷಗಳಷ್ಟು ಆಯುಸ್ಸನ್ನು ಕರುಣಿಸಿದರೆ ನಾನು ನಿಜವಾಗಿ ಚಿತ್ರಶಿಲ್ಪಿಯಾಗೇನು" ಎಂದು ದುಃಖದಿಂದ ತನ್ನ ಸಾವಿನ ಹಾಸಿಗೆಯಿಂದ ಮಗಳಿಗೆ ಅವನು ಹೇಳಿದನಂತೆ.

ಅವನ ಆಸಕ್ತಿ ವಿಶ್ವದಷ್ಟು ವಿಶಾಲವಾದುದು. ಅವನು ಅತ್ಯುತ್ತಮ ಕವನಗಳನ್ನೂ ಬರೆದಿದ್ದಾನೆ. ಕಾದಂಬರಿಕಾರನೂ ಆಗಿದ್ದನು. ಅನೇಕ ವಿನೋದ ಪೂರ್ಣ ಕೃತಿಗಳನ್ನು ಪ್ರಕಟಿಸಿದ್ದಾನೆ. ಅವನು ಅರವತ್ತೇಳನೆಯ ವಯಸ್ಸಿನಲ್ಲಿ ವ್ಯಾಧಿಗ್ರಸ್ಥನಾಗಿ ಆಗಲೆ ಮರಣವನ್ನು ಅಪ್ಪಬೇಕಾಗಿದ್ದವನು ಹೇಗೋ ಬದುಕಿಕೊಂಡು ಆರೋಗ್ಯವನ್ನು ಮತ್ತೆ ವೃದ್ಧಿಸಿಕೊಂಡ. ತನ್ನ ಈ ಸ್ವಚಿಕಿತ್ಸೆಯ ಬಗೆಗೆ ಒಂದು ವೈದ್ಯಕೀಯ ಸಚಿತ್ರವರದಿಯನ್ನು ಬರೆದನು.

ತನ್ನ ಅರವತ್ತನೆಯ ವಯಸ್ಸಿನಲ್ಲಿ ಅವನು ಸತ್ತಿದ್ದರೆ "ಮಾಂಗಾ" ಎನ್ನುವ ಅಸಾಧಾರಣ ಸಂಪುಟಗಳಿಗೆ ಮಾತ್ರ ಹೆಸರಾಗುತ್ತಿದ್ದನು. 'ಮಾಂಗಾ' ಎಂದರೆ ಮನಸ್ಸಿಗೆ ಹೊಳೆದಂತೆ ವಸ್ತುಗಳನ್ನು ಚಿತ್ರಿಸುವುದು. ಜೀವನದಲ್ಲಿ ಆರಿಸಿದ ಚಿತ್ರಗಳಿಂದಾದರೂ ಆಗಬಹುದು. ಈ ಹದಿನೈದು ಸಂಪುಟಗಳಲ್ಲಿ ಸಾವಿರಾರು ವಿವಿಧ ಭಂಗಿಯ ಜೀವನದ ನಾನಾರಂಗದ ಮಾನವಕೃತಿಗಳು ತುಂಬಿನಿಂತಿವೆ. ಸಮುದ್ರದಿಂದ ನಳ್ಳಿಗಳು ತೆವಳಿ ಬರುವ, ಭೂತಗಳು ಕಾಣಿಸಿಕೊಳ್ಳುವ, ಹೂಗಳು ಅರಳಿ ನಿಲ್ಲುವ. ತಮ್ಮ ಕಾಲಿನ ಚಲನೆಗಳನ್ನು ತೋರಲು ಕುದುರೆಗಳು ಗಾಳಿಯಲ್ಲಿ ಈಜುವ, ತಮ್ಮ ಉಸಿರಾಟಕ್ಕೆ ನೆರವಾಗುವ ಗಾಳಿಯನ್ನು ಪಡೆದಿರುವ ಗಂಟೆಗಳೊಡನೆ ನೀರಿಗೆ ನೆಗೆದ ಮಾನವರ ಹೀಗೆ ನಾನಾ ಬಗೆಯ ಚಿತ್ರ ಸಮೂಹದಿಂದ ಆ ಸಂಪುಟಗಳು ತುಂಬಿ ತುಳುಕಿವೆ. ಶಿಲ್ಪ ಇತಿಹಾಸ. ವನ್ಯ ಜೀವನ, ಮಲ್ಲರು, ಯೋಧರು, ಪೌರಾಣಿಕ ಸನ್ನಿವೇಶಗಳು ಮುಂತಾದುವನ್ನೆಲ್ಲಾ ಇಲ್ಲಿ ನೋಡಿ ಆನಂದಿಸುವುದೊಂದು ಹಬ್ಬವಾಗುತ್ತದೆ.

ಅದೃಷ್ಟವಶಾತ್ ಹೊಕುಸೇ ತನ್ನ ಇಳಿವಯಸ್ಸಿನಲ್ಲಿ ತೃಪ್ತಿಯ ಶಿಖರನನ್ನು ಕಂಡನು. ಈ ದಿನಗಳಲ್ಲಿ ಅವನ ಪ್ರಮುಖ ಸಾಧನೆಯ ಫಲ 'ಗಾಪ್ಲೇ' ಎನ್ನುವುದು. ರೇಖಾಚಿತ್ರಗಳ ಒಂದು ಸಂಕಲನ, ಅವನ ಅತ್ಯಂತ ಕುಶಲ ಚಿತ್ರಗಳ ಸಂಕಲನ ಅದು.

ಕುರುಡರು ಒಬ್ಬರ ನೆರವಿನಿಂದೊಬ್ಬರು ಕೈ ಹಿಡಿದು ನದಿಯನ್ನು ದಾಟುತ್ತಿರುವ ದೃಶ್ಯ, ಫ್ಯೂಜಿಯ ಮುವತ್ತಾರು ದೃಶ್ಯಗಳು ಅವನಕಲಾಕೃತಿಗಳಲ್ಲಿ ಅತ್ಯಂತ ಪ್ರಸಿದ್ಧಿಯಾದವು. ಪರ್ವತದ ಎರಡು ಸಾಮೂಹಿಕ ಚಿತ್ರಗಳಲ್ಲಿ ಒಂದು ಚಂಡಮಾರುತದಲ್ಲಿಯೂ, ಮತ್ತೊಂದು ಶಾಂತವಾತಾವರಣದಲ್ಲಿಯೂ ಚಿತ್ರಿಸಿದವು. ತುಂಬ ಜನಪ್ರಿಯವಾದ ಈ ಕೃತಿಗಳು ಅಷ್ಟೇರಮ್ಯವಾದವೂ ಸಹ. ಹೊಕುಸೇ ಎಂಥ ಅಧ್ಭುತ ಕೌಶಲವನ್ನು ಗಳಿಸಿಕೊಂಡಿದ್ದನೆಂಬುದಕ್ಕೆ ಇದೆ ಉತ್ತಮ ದರ್ಶನ. "ಕಾಂಗ್ವಾದ ಭಂಗ್ನ ತರಂಗ" ಎಂಬ ಅಪೂರ್ವ ಕಲಾಕೃತಿ, ಎಲ್ಲ ದೇಶದ ಕಲಾಭಿಮಾನಿಗಳ ಮೆಚ್ಚುಗೆಯನ್ನು ಗಳಿಸಿಕೊಂಡಿದೆ. ಈ ಚಿತ್ರಮಾಲೆಯ ವಿಶೇಷ ಕೃತಿ ಎನಿಸುವುದು, ಹೊಕುಸೇ ತನ್ನ ಇಳಿವಯಸ್ಸಿನಲ್ಲಿ ವಿಶೇಷವಾಗಿ ಬಳಸುತ್ತಿದ್ದ ಪರ್ಷಿಯಾ ನೀಲಿಯ ವರ್ಣದಿಂದ ಚಿತ್ರಿಸಿದುದು.

ತನ್ನ ಎಪ್ಪತ್ತೈದನೆಯ ವಯಸ್ಸಿನಲ್ಲಿ ತನ್ನ ರೇಖಾ ಚಿತ್ರಗಳ ಒಂದು ಸಂಗ್ರಹಕ್ಕೆ ಪ್ರಸ್ತಾವನೆಯನ್ನು ಬರೆಯುತ್ತ ತನ್ನ ಜೀವನದ ಸಾರವನ್ನು ಹೊಕುಸೇ ಚಿತ್ತರಿಸಿದ್ದಾನೆ. "ನನ್ನ ಆರನೆಯ ವಯಸ್ಸಿನಿಂದಲೆ ವಸ್ತುಗಳ ಆಕೃತಿಯನ್ನು ಚಿತ್ರಿಸುವ ಒಂದು ಹವ್ಯಾಸ ನನ್ನಲ್ಲಿ ಬೆಳೆದುಬಂದಿದೆ. ನಾನು ಐವತ್ತನೆ ಗಡಿಯನ್ನು ಮುಟ್ಟುವುದರಲ್ಲಿ ಅಸಂಖ್ಯಾತ ಚಿತ್ರಗಳನ್ನೆನೋ ರಚಿಸಿ ಪ್ರಕಟಿಸಿದೆ: ಆದರೆ, ನನ್ನ ಎಪ್ಪತ್ತನೆಯ ವಯಸ್ಸಿನೊಳಗೆ ಬರೆದ ಚಿತ್ರಗಳಾವುವೂ ಅಂಥ ಗಣನೀಯವೆನಿಸುವುದಿಲ್ಲ. ನನ್ನ ಎಪ್ಪತ್ತಮೂರನೆಯ ವಯಸ್ಸನ್ನು ಪ್ರಕೃತಿಯ ನಿಜವಾದ ರಚನಾ ವೈಕರಿಯನ್ನು ನಾನು ಅರಿತು ಕೊಂಡೆ; ಪ್ರಾಣಿಗಳ, ಸಸ್ಯಗಳ, ಮರಗಳ, ಪಕ್ಷಿಗಳ, ಮೀನುಗಳ ಹಾಗೂ ಕ್ರಿಮಿಕೀಟಗಳು ಮುಂತಾದುವುಗಳ ರಚನಾ ವಿಧಿಯನ್ನು ನಾನು ಕರಗತ ಮಾಡಿಕೊಂಡೆ. ಇದರ ಫಲವಾಗಿ ನನ್ನ ಎಂಬತ್ತನೆ ವಯಸ್ಸಿನ ಈ ನಿಟ್ಟಿನಲ್ಲಿ ಮತ್ತು ಪ್ರಗತಿಯನ್ನು ಸಾಧಿಸಿಕೊಂಡೆ. ನನ್ನ ತೊಂಬತ್ತನೆ ವಯಸ್ಸಿಗೆ ವಸ್ತುಗಳ ರಹಸ್ಯವನ್ನು ಬೇಧಿಸಬಲ್ಲೆನೆನಿಸಿತು. ನನ್ನ ನೂರನೆಯ ವಯಸ್ಸಿಗೆ ನಾನು ರಚಿಸುವ ಪ್ರತಿಯೊಂದು ವಸ್ತುವೂ ಒಂದು ಬಿಂದುವಾಗಿರಲಿ ಅಥವಾ ರೇಖೆಯಾಗಿರಲಿ ಸಜೀವತೆಯನ್ನು ಪಡೆದಾವು? ನಾನು ಅಲ್ಲಿಯವರೆಗೆ ಬದುಕುವುದನ್ನು ಕಾಣಬಲ್ಲವರನ್ನು ಈ ವಿಷಯದಲ್ಲಿ ನಾನು ಈ ಮಾತನ್ನು ಉಳಿಸಿಕೊಳ್ಳುವೆನೋ ಇಲ್ಲವೋ ಎಂಬುದನ್ನು ನೋಡಲಿ ಎಂದು ಬೇಡುತ್ತೇನೆ" ತನ್ನ ಕೊನೆಯ ಹಾಗೂ ಸರಿಯಾಗಿ ಅನ್ವಯವಾಗದ ಹೆಸರಿನೊಡನೆ ಈ ಪದಗಳನ್ನು ಬರೆದು ಸಹಿ ಹಾಕಿದ—"ಚಿತ್ರ ರಚನೆಯಲ್ಲಿ ಹುಚ್ಚು ಹಿಡಿದ ಮುದಿಮಾನವ".

(೧೯೫೫ರ ಅಕ್ಟೋಬರ್ ತಿಂಗಳ 'ರೀಡರ್ಸ್ ಡೈಜೆಸ್ಟ್' ಸಂಚಿಕೆಯಲ್ಲಿ ಪ್ರಕಟವಾದ ಲೇಖನದ ಸಾರಸಂಗ್ರಹ)

# ಸಿನಿಮಾ ಫೆಮಿನಿಸ್ಟ್ ಹೆಣ್ಣಿನ ದೃಷ್ಟಿಕೋನದಿಂದ

—ಮೀರಾ ಚಕ್ರವರ್ತಿ

"FEMINIST" ಎಂಬ ಪದದ ಅರ್ಥವೇನು? ಚಲನ ಚಿತ್ರದಲ್ಲಿ "Feminist Approach" ಯಾವ ವಿಶಿಷ್ಟ ಅರ್ಥವನ್ನು ಉದ್ದೇಶಿಸುತ್ತದೆ? ಆಗಾಗ್ಗೆ (ಅನೇಕ ಸಲ) ಚಿತ್ರದ ಇಯತ್ತೆಯನ್ನು ಪರೀಕ್ಷಿಸಲೂ ಹಾಗೂ ಪರಿಶೀಲನಾ ಭಾವದಿಂದ ವೀಕ್ಷಿಸಲು ಸಂಶೋಧನ ಕ್ರಮವನ್ನು ಪರಿಗಣಿಸುವುದೂ ಉಂಟು.

ಸ್ತ್ರೀಯರನ್ನು ವ್ಯಕ್ತಿಗಳನ್ನಾಗಿ ಆದರಿಸದೆ ಕೇವಲ ನೋಟದ ಅಥವಾ ಭೋಗ ವಸ್ತುಗಳನ್ನಾಗಿ ಪ್ರದರ್ಶಿಸುತ್ತಿರುವ ಆಧುನಿಕ ಕಮರ್ಷಿಯಲ್ ಸಿನಿಮಾಗಳಿಗೆ ವಿರುದ್ಧ ಮತ್ತೊಂದು ರೀತಿಯ ಚಿತ್ರ ನಿರ್ಮಾಪಣೆಯಾಗುತ್ತಿದ್ದು ಅದು 'ಕ್ಲಾಸಿಕಲ್ ಸಿನಿಮಾ'ದ ಪಾರ್ಶ್ವಿಕ ಭಾಗವನ್ನುದ್ದೇಶಿಸುತ್ತಿರುವುದನ್ನು ನಾವು ಈ ನಡುವೆ ಕಾಣುತ್ತಿದ್ದೇವೆ.

ಈವರೆಗೂ ಸಿನಿಮಾಗಳಲ್ಲಿ ಯಾವುದೇ ಬದಲಾವಣೆಗಳಿಲ್ಲದೆ ಏಕಪ್ರಕಾರವಾಗಿ ತಾಯಿಯಂತೆ ಅಥವಾ ಅಕ್ಕ-ತಂಗಿಯಂತೆ ಅಥವಾ ದುಷ್ಟ ಸ್ತ್ರೀಯಾಗಿ (vamp) ಹೆಣ್ಣಿನ ಚಿತ್ರಣವಾಗುತ್ತಿತ್ತು. ಈಗಲೂ ಇದೇ ರೀತಿಯ ಚಿತ್ರಣವನ್ನು ಕಾಣಬಹುದು. ಸಾಮಾಜಿಕ ಹಾಗೂ ಸಾಂಸ್ಕೃತಿಕ ರೀತಿಯಿಂದಲೂ ಸ್ತ್ರೀಯೆಂದರೆ ಸ್ವಾಭಾವಿಕವಾದ ಕೆಲವು ಗುಣಗಳಿಂದ ಕೂಡಿರಬೇಕು ಎಂಬ ಒಂದು ಕಲ್ಪನೆ ಬಹಳ ಹಿಂದಿನಿಂದಲೂ ಜನರ ಮನಸ್ಸಿನಲ್ಲಿ ಮೂಡಿಬಂದಿರುವುದೇ ಈ ರೀತಿಯ ಪ್ರದರ್ಶನಕ್ಕೆ ಕಾರಣ. ಉದಾಹರಣೆಗೆ, "ಕ್ಯಾಪಿಟಲಿಸ್ಟ್ ಪ್ಯಾಟ್ರಿಯಾರ್ಕಲ್" ಸಮಾಜದಲ್ಲಿ ಸ್ತ್ರೀಯು ವಿಧೇಯಳಾಗಿಯೂ ಪರಿಶ್ರಮಳಾಗಿಯೂ ಪ್ರದರ್ಶಿಸಲ್ಪಟ್ಟಿರುತ್ತಾಳೆ. ಈ ಸಾಮಾಜಿಕ ವಿಧಿನಿಯಮದಿಂದ ಆಕೆ ಲೇಶಮಾತ್ರ ಹಾದಿತಪ್ಪಿದರೂ, ಪುನಃ ಅದೇ ನಿಯಮಕ್ಕೆ ಕೊಂಡೊಯ್ಯಲು ಆಕೆಯನ್ನು ಒಳ್ಳೆಯ ಕುಟುಂಬದ ಹುಡುಗನಿಗೆ ಕೊಟ್ಟು ಲಗ್ನ ಮಾಡಿಯೋ, ದಾರಿತಪ್ಪಿದ್ದಕ್ಕಾಗಿ ಶಿಕ್ಷೆ ವಿಧಿಸಿಯೋ ಅಥವಾ ಬೇರಾವ ಮಾರ್ಗದಲ್ಲಾದರೂ ಸರ್ವದಾ ಒಂದಲ್ಲ ಒಂದು ಪ್ರಯತ್ನ ನಡದೇ ಇರುತ್ತದೆ. ಹೀಗಿದ್ದೂ ಆಕೆ ತನ್ನ ಪತಿಗೆ ದ್ರೋಹಮಾಡಿದಲ್ಲಿ, ವಿಶ್ವಾಸಘಾತುಕಳಾಗಿದ್ದಲ್ಲಿ ಆಕೆಗೆ ಇರುವ ದಾರಿ

---

ಮೀರಾ ಚಕ್ರವರ್ತಿ, ಸಂಸ್ಕೃತ ವಿಭಾಗ, ಜ್ಞಾನಭಾರತಿ, ಬೆಂಗಳೂರು-560 056

ಆತ್ಮಹತ್ಯೆ. ಇಲ್ಲ, ಆಕೆಯ ಕೊಲೆ. ಯಾವ ರೀತಿಯಾದರೂ ವಿಧಿಸಿವ ನಿಯಮಗಳನ್ನು ಪಾಲಿಸಲೇಬೇಕೆಂಬ ಒತ್ತಾಯ ಹೆಂಗಸಿನ ಮೇಲೆ ಇದ್ದೇ ಇರುತ್ತದೆ.

ಆದರೆ, ಸ್ತ್ರೀಯ ದೃಷ್ಟಿಕೋನದಿಂದಲೋ ಇಲ್ಲ ಚಿತ್ರವನ್ನು ನಿರ್ದೇಶಿಸುವ ವ್ಯಕ್ತಿ ಹೆಣ್ಣಾಗಿದ್ದ ಪಕ್ಷ, ಈ ರೀತಿಯದೊಂದು ಸನ್ನಿವೇಶವು ತದಾಚಿತ್ ಬಾರದೇ ಇರಬಹುದು. ಕಾರಣ, ಆಕೆ ತನ್ನ ಸಮಾಜದಲ್ಲಿ ಹೆಂಗಸಿನ ಪ್ರತ್ಯೇಕ ಸ್ಥಾನಮಾನಗಳೇನು ಎಂಬುದರ ಬಗ್ಗೆ ಎಡೆಬಿಡದೆ ಶೋಧನೆಯನ್ನು ನಡೆಸುತ್ತಿರುವುದರಿಂದ ಹಿಂದಿನಿಂದಲೂ ಬಂದ ನಿಯಮಗಳನ್ನು ಮತ್ತು ಆದೇಶಗಳನ್ನು ಲೇಶಮಾತ್ರವಾದರೂ ಉಲ್ಲಂಘಿಸಬೇಕಾಗುತ್ತದೆ. ಇದನ್ನೇ ನಾವು 'ಅರ್ಥ್' ಚಿತ್ರದ "ಪೂಜಾ"ಳ ಪಾತ್ರದಲ್ಲಿ ಕಾಣುತ್ತೇವೆ. ತನ್ನ ಪತಿಯಿಂದ (ಇಂದರ್ ಮಲ್ಹೋತ್ರ) ಅವಮಾನಿತಳಾಗಿ ಸಂಪೂರ್ಣವಾಗಿ ಪರಿತ್ಯಜಿಸಲ್ಪಟ್ಟಿದ್ದರೂ ಕೊನೆಗೆ ಆತನು ಪುನರ್ಮಿಲನಕ್ಕಾಗಿ ಸಂಧಾನ ಮಾಡಲು ಬಂದಾಗ ಪೂಜಾ ನಿರಾಕರಿಸುತ್ತಾಳೆ. ಇದು ಈ ಚಿತ್ರದಲ್ಲಿ ವಿಶೇಷವಾಗಿ ಕಂಡುಬರುವ ನವ್ಯದೃಷ್ಟಿ. ಸಾಮಾನ್ಯವಾಗಿ ಇತರ ಚಿತ್ರಗಳಲ್ಲಿ 'ಅರ್ಥ್'ದ ನಿರ್ದೇಶನವಾಗಿದ್ದರೆ ಪೂಜಾ ತನ್ನ ಪೂರ್ವ ಸಂಕಟಗಳನ್ನೆಲ್ಲ ಮರೆತು, ತನ್ನ ಪತಿಯನ್ನು ಕ್ಷಮಿಸಿ, ಸಂತೋಷವಾಗಿ ಮತ್ತೆ ದಾಂಪತ್ಯ ಜೀವನವನ್ನು ಪ್ರಾರಂಭಿಸಬೇಕಿತ್ತು. ಆದರೆ ಇಲ್ಲಿ ಹಾಗಿಲ್ಲ. ಕಾರಣ ಸಮಾಜದ ಸಾಮಾನ್ಯ ರೀತಿನೀತಿಯನ್ನು ಪ್ರಶ್ನಿಸಿ ಸ್ತ್ರೀಯ ಸ್ಥಾನವನ್ನು ಊರ್ಜಿತಪಡಿಸಿ ಚಿತ್ರೀಕರಣದ ಇತಿಹಾಸವನ್ನೆ ಬದಲಾಯಿಸಬೇಕೆಂಬುದು ನಿರ್ದೇಶಕರ ಇಚ್ಛೆ.

ಪ್ರತಿಯೊಂದು ಚಿತ್ರವೂ ವ್ಯಾಪಾರದ ಸರಕು ಎಂಬುದು ಎಲ್ಲರಿಗೂ ತಿಳಿದ ವಿಷಯವೆ. ಹಣದ ಸಹಾಯದಿಂದ ಚಿತ್ರವೊಂದನ್ನು ಕೊಟ್ಟು ಪಡೆಯುವುದು ಮಾತ್ರವಲ್ಲ, ಆದರಲ್ಲಿ ಬರುವ ಪ್ರತಿಯೊಂದು ಪಾತ್ರವೂ ನಿರೂಪಣೆಯೂ ಕೂಡ ವಿನಿಮಯ ಸರಕು ಹೌದು. ವೀಕ್ಷಕರು ಚಿತ್ರವನ್ನು ಖರೀದಿಸುವುದಿಲ್ಲ. ಆದರೆ, ನಿಶ್ಚಿತ ವೇಳೆ ಹಾಗೂ ಸ್ಥಳದಲ್ಲಿ ಆದೇ ಚಿತ್ರವನ್ನು ವೀಕ್ಷಿಸುವ ಹಕ್ಕನ್ನು ಅವರು ಪಡೆದಿರುತ್ತಾರೆ. ಆದ್ದರಿಂದ "ಸಿನೇಮಾ" ಎಂಬುದು ಔದ್ಯೋಗಿಕ (ಕೈಗಾರಿಕಾ) ಉತ್ಪಾದನಾ ವಸ್ತು ಅಲ್ಲ. ಈ ಉದ್ಯಮ ಕ್ಷೇತ್ರದಲ್ಲಿ ಪರಸ್ಪರ ನಿಕಟ ಸಂಬಂಧವನ್ನು ಏರ್ಪಡಿಸುವ ಪ್ರತಿನಿಧಿಯೂ ಕೂಡ. ಆದರೆ ಈ ಮಾಧ್ಯಮವು ಬಹುಮಟ್ಟಿಗೆ ಪುರುಷರ ಅಧೀನದಲ್ಲಿರುವುದರಿಂದ, ಸ್ವಂತ ಲಾಭಕ್ಕಾಗಿ ಮನುಷ್ಯತ್ವವನ್ನೇ ಅದರಲ್ಲೂ ಹೆಂಗಸಿನ ಮಾನಹಾನಿಯನ್ನು ಎಲ್ಲ ರೀತಿಯಲ್ಲೂ ಚಿತ್ರಪಟದಲ್ಲಿ ಪ್ರದರ್ಶಿಸಲು ಗಂಡಸು ಹೇಸನು. ಆದರೆ ಈ ಆಧಿಪತ್ಯವು ಸಂಪೂರ್ಣವಾಗಿ ಸ್ತ್ರೀಯಲ್ಲಿದ್ದ ಪಕ್ಷ, ಸ್ತ್ರೀ ಪಾತ್ರಗಳೂ ಕೂಡ ಖಂಡಿತ ಮರ್ಯಾದೆಯನ್ನು ಹೊಂದುವುವು.

ಉದಾಹರಣೆಗೆ, ಹಿಂದಿನಿಂದಲೂ ಬಂದ ಸಂಸ್ಕೃತಿಗಳನ್ನವಲಂಭಿಸಿ, ಅದೇ ನೀತಿ ನಿಯಮಗಳನ್ನು ಆಧಾರವಾಗಿಟ್ಟು ತೆಗೆಯುವ ಆಧುನಿಕ ಚಿತ್ರಗಳಲ್ಲಿ, ಹೆಣ್ಣಿನ ಪಾತ್ರಕ್ಕೆ ಹಾಗೂ ಆಕೆಯ ಅಭಿಪ್ರಾಯಗಳಿಗೆ ನಿಗ್ರಹವುಂಟೇ ವಿನಃ ಗೌರವವಿಲ್ಲ. ಆದ್ದರಿಂದ, ತಮ್ಮ ಕತೆಗಳನ್ನು ಕೇಳಲು, ತಮ್ಮ ಆಂತರಿಕ ಅನ್ವೇಷಣೆ (ಶೋಧನೆ) ಯನ್ನು ತಾವೇ ಸ್ವತಃ ಮಾಡಿಕೊಳ್ಳಲು, ತಮ್ಮತನವನ್ನುಳಿಸಿಕೊಳ್ಳಲು, ತಮ್ಮ ವ್ಯಕ್ತಿತ್ವವನ್ನು ಹೆಚ್ಚಿನ ಸ್ವಾತಂತ್ರದಿಂದ ಹೊರಪಡಿಸಲು ಇರುವ ಒಂದೇ ಹಾದಿ ಯೆಂದರೆ 'ಹೆಣ್ಣಿನ ದೃಷ್ಟಿಕೋನ'ದಿಂದ ನಿರ್ಮಾಪಿಸುವ ಸಿನಿಮಾ. ಠಾಗೋರ್‌ರವರ ಕತೆಯ ಆಧಾರದ ಮೇಲೆ ತೆಗೆದ "ಸ್ತ್ರೀಪತ್ರ" ಎಂಬ ಚಿತ್ರದಲ್ಲಿ ಪತ್ನಿಯ ಪಾತ್ರವನ್ನು ನಿರ್ವಹಿಸುವ ಮಾಧಬೀ ಮುಖರ್ಜಿ ಚಿತ್ರದ ಸಮಾಪ್ತಿಯಲ್ಲಿ ಮನೆಯನ್ನು ತೊರೆದು ಹೋಗುವಾಗ ಅಲ್ಲಿ ಸಾಮಾಜಿಕ ರೀತಿಯು ಅಡಿಮೇಲಾಗುವುದನ್ನು ಕಾಣಬಹುದು. ಇದಕ್ಕೆ ಕಾರಣ ಅವಳಿಗಾದ ಮಾನಸಿಕ ಬಂಧನ (intellectual oppression) ತನ್ನ ಪತಿಗೆ ಅತ್ಯಂತ ದುಃಖದಿಂದ ಬರೆದ ಪತ್ರದಲ್ಲಿ ಆಕೆಯು ಅಷ್ಟು ವರ್ಷಗಳ ಕಾಲ ತಾವಿಬ್ಬರು ಒಟ್ಟಾಗಿದ್ದೂ ಕೂಡ ಪತಿಯು ತನ್ನ ಕವಿತಾಶಕ್ತಿಯನ್ನು ಗುರುತಿಸದೆ ಇದ್ದನಲ್ಲ ಎಂಬ ವಿಷಾದವನ್ನು ವ್ಯಕ್ತಪಡಿಸುತ್ತಾಳೆ. ಈ ಚಿತ್ರದಲ್ಲೂ ಪತ್ನಿ ತನ್ನ ಸ್ವಾತಂತ್ರಕ್ಕಾಗಿ ಪತಿಯನ್ನು ತ್ಯಜಿಸಿ, ಪುರುಷ ಪ್ರಧಾನ ಸಮಾಜವು ಹೆಂಗಸಿನ ಜೀವನಕ್ಕೆ ಮೊದಲೇ ಇತ್ತಿರುವ ನಿಶ್ಚಿತವಾದ ಅಭಿಪ್ರಾಯವನ್ನು ಅಲಕ್ಷ್ಯಗೊಳಿಸು ವುದನ್ನು ಕಾಣಬಹುದು. ಈ ತರಹದ ಚಿತ್ರೀಕರಣವು ಹೆಂಗಸಿನ ಮನಸ್ಸಿನ ಆಗು ಹೋಗುಗಳನ್ನು ಮತ್ತು ಲೋಕದಲ್ಲಿ ಆಕೆಯ ಸ್ಥಾನಮಾನಗಳನ್ನು ಸೂಕ್ಷ್ಮವಾಗಿ ಪರಿಶೀಲನೆ ಮಾಡಿದವರಿಗೆ ಮಾತ್ರ ಸಾಧ್ಯ.

ಯುಗಯುಗಗಳಿಂದಲೂ ಗಂಡಸಿಗೇ ಸಮಾಜದಲ್ಲಿ ಪ್ರಾಧಾನ್ಯಕೊಟ್ಟು, ಆ ಅಸ್ತಿವಾರದ ಮೇಲೆ ಬೆಳೆಸಿದ ಹೆಂಗಸಿನ ಜೀವನವು ಆಧುನಿಕ ಸಿನಿಮಾಗಳಲ್ಲಿ ಹೇಗೆ ಪ್ರದರ್ಶಿತವಾಗುತ್ತಿವೆ ಎಂಬುದರ ಬಗ್ಗೆ ಮಾತ್ರ ಈ ತನಕ ಚರ್ಚಿಸಲಾಯಿತು. ಇನ್ನು ಮುಂದೆ ಆಧುನಿಕ ಸಿನಿಮಾ ಯಾವ ರೀತಿ ಹೆಂಗಸಿನ ಪಾತ್ರವನ್ನು ಚಿತ್ರಿಸಲು ಸಹಾಯಕ ವಾಗಿದೆ, ಈಗಿರುವ ಸಾಮಾನ್ಯ ಚಿತ್ರಣ ಪದ್ಧತಿಗಳ ಹೊರತಾಗಿ ಅನ್ಯೇತರ ರೀತಿ ಗಳಿಂದಲೂ ಸ್ತ್ರೀಪಾತ್ರದ ಚಿತ್ರಣದಸಾಧ್ಯತೆಯುಂಟೇ ಎಂಬುದನ್ನು ವಿಚಾರಮಾಡೋಣ. ಸ್ತ್ರೀಯ ಅಸ್ತಿತ್ವವನ್ನು ಕಾಪಾಡಲು ಈ ಹುಂಕಾರವೊಂದೇ ದಾರಿ.

ಆಧುನಿಕ ಕಮರ್ಷಿಯಲ್ ಸಿನಿಮಾದ ಪ್ರಧಾನ ಅಂಶವಾಗಿರುವ "ಕಾಮುಕ ಅನುದರ್ಶನ"ವನ್ನೂ ಹೆಂಗಸನ್ನು ಈ ಕಾರಣಕ್ಕಾಗಿಯೇ ಪಾತ್ರವಹಿಸಲು ಮಾಡಿರುವ ಏರ್ಪಾಡನ್ನೂ ಕಿತ್ತೊಗೆಯಲು ಇರುವ ದಾರಿ "ಫೆಮಿನಿಸ್ಟ್" ಮಾರ್ಗದಲ್ಲಿ ಚಿತ್ರೀಕರಣ ಈ ಕಾಮುಕ ಪ್ರದರ್ಶನಕ್ಕೆ ಆಂಗ್ಲ ಭಾಷೆಯಲ್ಲಿ "ಪೋನೋಗ್ರಾಫಿ" ಎಂದು

ಕರೆಯುವರು. ಇದೂ ಸಹ ಪುರುಷ-ಸ್ತ್ರೀಯರ ಮಧ್ಯೆ ಇರುವ ವೈಷಮ್ಯವನ್ನು ಹೆಚ್ಚಿಸಿದೆಯೇ ಹೊರತು ಮತ್ತಾವ ಬದಲಾವಣೆಯನ್ನೂ ಮಾಡಿಲ್ಲ. ಇದಲ್ಲದೆ ಸಮಾಜದಲ್ಲಿ ಹೆಣ್ಣಿನ ಸ್ಥಾನ, ಮತ್ತು ಆಕೆಗೂ ಸಮಾಜದ ವ್ಯವಸ್ಥಾಪನೆಗೂ ಜನಾಚಾರ ಮತ್ತು ಚಾರಿತ್ರಿಕ ಪರಿಸ್ಥಿತಿಗಳಿಗೂ ಇರುವ ಸಂಬಂಧಗಳನ್ನು ಅರ್ಥಗರ್ಭಿತವಾಗಿ ವರ್ಣಿಸಲು ಕಾರಣವಾಗಿದೆ. ಈ ಆಧಾರಗಳ ಮೇಲೆ ಪೋರ್ನೋಗ್ರಾಫಿ ಸ್ತ್ರೀಸಂಸ್ಕೃತಿಯನ್ನು ಉದಾತ್ತವಾಗಿ ವಿಶ್ಲೇಷಿಸಿದೆ.

ಥಳಕಿಸುವ ಮೋಹಕ ಮೂರ್ತಿಯಾಗಿ ಹೆಣ್ಣು ಗಂಡಸಿನ ಕಾಮುಕತೆಯ ದೌರ್ಜನ್ಯಕ್ಕೆ ಒಳಗಾಗುವ ಆಕೃತಿಯಾಗಿ ಸಿನಿಮಾಗಳಲ್ಲಿ ಪ್ರದರ್ಶಿಸಲ್ಪಡುತ್ತಾಳೆ. ಇದಕ್ಕೆ ತಾರ್ಕಿತವಾದ ಕಾರಣ ಸಮಾಜದಲ್ಲಿ ಪುರುಷನಿಗಿರುವ ಪ್ರಾಧಾನ್ಯ ಮತ್ತು ಅಧಿಕಾರ ಪೋರ್ನೋಗ್ರಾಫಿಯೂ ಕೂಡ ಇದಕ್ಕೆ ಬೆಂಬಲವನ್ನೀಯುತ್ತದೆ. ಇವರಲ್ಲಿ ಹೆಣ್ಣಿನ ಶರೀರವು ಕಾಮುಕ ವಸ್ತುಮಾತ್ರವಲ್ಲ ವ್ಯಾಪಾರ ಸರಕಾಗಿಯೂ ಪ್ರದರ್ಶಿತವಾಗುತ್ತಿದೆ. ಪುರುಷಪ್ರಧಾನ ಸಮಾಜದಲ್ಲಿಯೂ ಸ್ತ್ರೀಗಿರುವ ಸ್ಥಾನ ಇದೇ ಎಂದು ಹೇಳಬಹುದು.

ಅದಾಗ್ಯೂ ಇಂದು ಸ್ತ್ರೀಯ ಕುರಿತ ವಿಚಾರಧಾರೆಯು ನವೀನರೀತಿಗಳಲ್ಲಿ ಚಿತ್ರೀಕರಣವನ್ನು ನಡೆಸಲು ಸಹಾಯಕವಾಗಿದ್ದು, ಕ್ರಮೇಣ ಪ್ರಾಮುಖ್ಯ ಪಡೆಯುತ್ತಲಿದೆ. ಈ ಬಗೆಯ ಚಿತ್ರಗಳು "ಸ್ತ್ರೀ ಪ್ರಾಮುಖ್ಯ"ವಾಗಿದ್ದು ಜಗತ್ತಿನ ಎಲ್ಲಾ ಸ್ತ್ರೀಸಮಾಜಗಳಿಂದಲೂ ಚಳುವಳಿಗಳಿಂದಲೂ ಅನಿವಾರ್ಯ ಪ್ರಭಾವವನ್ನು ಹೊಂದುತ್ತಲಿದೆ. ರೇಯವರ 'ಚಾರುಲತಾ', 'ಘಾರೇ ಬ್ಯಾರೇ', ಬೆನೆಗಲ್‌ರವರ 'ಭೂಮಿಕಾ' ಹಾಗೂ ಇತರರ 'ಎಕ್ ಬಾರ್ ಫಿರ್' ಮತ್ತು 'ಅರ್ಥ್' ಈ ಚಿತ್ರಗಳಿನ ನಾರಿಯ ಪಾತ್ರವು ನಿಷ್ಕಪಟ ಹಾಗೂ ಅರ್ಥಗರ್ಭಿತವಾದವು. ಈ ಚಿತ್ರಗಳಲ್ಲಿ ಬರುವ ನಾರಿಯರು ಕೇವಲ ಥಳುಕಿನ ಪ್ರತಿಮೆಗಳಾಗಿರದೆ ಧೈರ್ಯವಂತರಾಗಿಯೂ ತಮ್ಮದೇ ಆದ ರೀತಿಯಲ್ಲಿ ಪೂರ್ಣ ಕ್ರಾಂತಿಯನ್ನುಂಟು ಮಾಡುವವರಾಗಿಯೂ ಇದ್ದಾರೆ. ಇದರಿಂದಾಗುವ ಮುಖ್ಯ ಪರಿಣಾಮವೆಂದರೆ ಬಹು ಹಿಂದಿನಿಂದಲೂ ಸಿನಿಮಾದಲ್ಲಿ ವಾಡಿಕೆಯಲ್ಲಿರುವ ಹೆಂಗಸಿನ ಕುರಿತ ಅಭಿಪ್ರಾಯಗಳ ಎದುರಿಸುವಿಕೆ. ಆದರೆ ಈ ಚಿತ್ರಗಳಲ್ಲಿ ನಾರಿಯ ಸರ್ವ ಸಮಸ್ಯೆಗಳನ್ನು ಪರಿಹರಿಸುವ ಅಥವಾ ಅವರನ್ನು ಪುನರುದ್ಧರಿಸುವ ಭರವಸೆಗಳಲ್ಲದೆ ಮತ್ತು ವಿಚಿತ್ರವಾದ ರಂಜಕ ಲೋಕಗಳ ಶೃಂಗಾರ ಸೃಷ್ಟಿಯಿಲ್ಲದೆ ವಾಸ್ತವ ಪ್ರಪಂಚದ ಸಂಭವಗಳೇ ಕಥಾವಸ್ತುಗಳಾಗಿರುವುವು. ಉದಾಹರಣೆಗೆ "ಎಕ್‌ಬಾರ್ ಫಿರ್" ಹಾಗೂ "ಅರ್ಥ್" ಚಿತ್ರಗಳಲ್ಲಿನ ಸ್ತ್ರೀ ಪತಿಯನ್ನು ಸ್ವೀಕರಿಸಬೇಕೇ ಇಲ್ಲ ಪ್ರಿಯತಮನನ್ನೇ ಎಂಬ ದ್ವಂದ್ವ ಪರಿಸ್ಥಿತಿಗೆ ಸಿಲುಕಿ ಹೊಯ್ದಾಡುವುದನ್ನು ನಾವು ಕಾಣುತ್ತೇವೆ. ಆದರೆ ನಮಗೆ ಆ ಅರಿವು ಮುಖ್ಯವಲ್ಲ. ಮುಖ್ಯವಾದದ್ದು ಆಕೆ ಹೇಗೆ, ಯಾವ

ರೀತಿಯಲ್ಲಿ ಈ ಸಮಸ್ಯೆಗಳನ್ನೆದುರಿಸಿ, ಸೂಕ್ತ ನಿರ್ಣಯಗಳನ್ನು ಕೈಗೊಂಡು ಬದುಕನ್ನು ಸಾಗಿಸುತ್ತಿರುವಳೋ ಎಂಬುದು. ಇಂತಹ ಸನ್ನಿವೇಶಗಳನ್ನು ವಾಸ್ತವ ರೀತಿಯಲ್ಲಿ ಚಿತ್ರಿಸುವುದು ಗುರಿಯಾಗಿರಬೇಕೇ ಹೊರತು ಯಾವುದೋ ಶೃಂಗಾರಮಯವಾದ ಜಗತ್ತಿನಲ್ಲಿದ್ದುಕೊಂಡು ಸಕಲ ಸಮಸ್ಯೆಗಳೂ ತಾವಾಗಿಯೇ ಅಮಾನುಷ ರೀತಿಗಳಲ್ಲಿ ಪರಿಹಾರಗೊಳ್ಳುವ ಹಾಗೆ ಚಿತ್ರಿಸುವುದು ಮುಖ್ಯ ಧ್ಯೇಯವಾಗಿರಬಾರದು. "ಸ್ತ್ರೀ ವೈಕ್ತಿ ವೈಶಿಷ್ಟ್ಯವನ್ನು". ನಾರಿಯರ ಸಮಸ್ಯೆಗಳನ್ನು ಮತ್ತು ಅವರ ವ್ಯಕ್ತಿತ್ವವನ್ನು ಆಧಾರವಾಗಿಟ್ಟು ತೆಗೆಯುವ ಚಿತ್ರಗಳಲ್ಲಿ ಕಾಣಬಹುದೇ ಹೊರತು ಅನ್ಯೇತರ ಚಿತ್ರಗಳಲ್ಲಲ್ಲ. ಜನಸಾಮಾನ್ಯರು ತಮ್ಮ ಸುತ್ತಲಿನ ಸಾಮಾಜಿಕ, ರಾಜಕೀಯ ಮತ್ತು ಇನ್ನಿತರ ಪರಿಸರಗಳ ಎಲ್ಲಾ ರೀತಿಯ ಪ್ರತ್ಯಕ್ಷ ಪರೋಕ್ಷ ಅನುಭವಗಳಿಂದ ಎಚ್ಚೆತ್ತಾಗ ಮಾತ್ರ ಸಿನಿಮಾಗಳಲ್ಲಿ ಕಂಡುಬರುವ ಹೊಸ ಬದಲಾವಣೆಗಳಿಂದ ಪ್ರಭಾವಿತರಾಗುವರು. ಉದಾ : ಪ್ರಜಾಪ್ರಭುತ್ವ ಸಮತಾವಾದ ಸಮಾಜದಲ್ಲಿ ಸ್ತ್ರೀ ಪುರುಷರ ಮಧ್ಯೆ ಸಂಬಂಧವು ಮಾನವೀಯತಾ ಭಾವನೆಯಿಂದ ಕೂಡಿರುತ್ತದೆಯೇ ಹೊರತು ಬಂಡವಾಳ ಶಾಹಿ ಸಮಾಜದಂತೆ ಆಸ್ತಿಯ ತಳಹದಿಯಲ್ಲಲ್ಲ. ಈ ವ್ಯತ್ಯಾಸವು ಸಿನಿಮಾದಲ್ಲಿಯು ಕಂಡುಬರುತ್ತಿದೆ. ಕಮರ್ಷಿಯಲ್ ಸಿನಿಮಾಗಳಲ್ಲಿನ ನಾರಿಯು ಕಾದಂಬರಿಯ ಕಲ್ಪಿತ ಸನ್ನಿವೇಶಕ್ಕೆ ಸಂಬಂಧಿತಳಾಗಿರುತ್ತಾಳೆಯೇ ವಿನಃ ಐತಿಹಾಸಿಕ ಘಟನೆಗಳಿಗಲ್ಲ, ಆದರೆ ಸಮಾಜದಲ್ಲಿ ವಾಸ್ತವವಾದ ಮಾನವೀಯ ಸಂಬಂಧವನ್ನು ಹುದುಬಾಳ್ತನವನ್ನು ಎತ್ತಿತೋರುವ ಚಿತ್ರಗಳಲ್ಲಿ ಆಕೆಯ ಜೀವನದ ಹಲವು ಪ್ರಶ್ನೆಗಳನ್ನು, ಪರಸ್ಪರ ಭೇದಾಭೇದಗಳನ್ನು ಮತ್ತು ವಿರೋಧಬಾಳನ್ನು ಎದುರಿಸುವ, ಇಂತಹ ಪ್ರಶ್ನೆಗಳಿಂದಲೇ ತನ್ನ ವಿಚಾರ ಶಕ್ತಿಯನ್ನು ಬೆಳೆಸಿಕೊಳ್ಳುವ ಹಾಗೂ ಸಮಾಜದ ಭೂತ-ಭವಿಷ್ಯ ಸ್ಥಿತಿಗತಿಗಳನ್ನರಿಯುವ ವ್ಯಕ್ತಿಯಾಗಿ ಮಾರ್ಪಾಡು ಹೊಂದುತ್ತಾಳೆ. She is both 'Character' and 'History'. ಈ ರೀತಿಯ ಪ್ರದರ್ಶನದಲ್ಲಿ "ಸತ್ಯತೆ"ಯು ಇರುವುದರಿಂದ ಈ ಚಿತ್ರಗಳೂ ಕೂಡ ಸ್ವಲ್ಪ ಅಸಾಧಾರಣವಾಗಿರುತ್ತವೆ. ಇದರಿಂದ ಸ್ತ್ರೀಯರು ಸ್ವಪ್ರಜ್ಞೆಯನ್ನು ಪಡೆಯುವರಲ್ಲದೆ ಅವರಲ್ಲಿ ದೃಢವಾದ ಐಕ್ಯತೆಯೂ ಸ್ಥಾಪಿತವಾಗುವುದು.

ನಾಟಕ ವಿಮರ್ಶೆ

# ಮಾರಿಕೊಂಡವರು

— ಎ. ಆರ್. ನಾಗಭೂಷಣ

1968ರಲ್ಲಿ ದೇವನೂರು ಮಹಾದೇವ ಬರೆದ "ಮಾರಿಕೊಂಡವರು" ಮೆಲು ದನಿಯಲ್ಲಿ ಗಟ್ಟಿ ಜೀವನಾನುಭವವನ್ನು ದಾಖಲಿಸುವ ಕತೆ. ಎಂಟೇ ಪುಟಗಳಷ್ಟು ಚಿಕ್ಕದಾದ ಈ ಕತೆಯಲ್ಲಿ ಬಡ ದಲಿತ ಗಂಡ ಹೆಂಡಿರ ಜೀವನ ವಸ್ತುಲ್ಯರಹಿತವಾಗುವ ಚಿತ್ರವಿದೆ. ವರ್ಗ ಮತ್ತು ಜಾತಿ ಎರಡರಲ್ಲೂ ಕೀಳು ಮಟ್ಟದಲ್ಲಿದ್ದು ಮೇಲಿನವರ ದಮನಕ್ಕೆ ಒಳಗಾಗಿ ಅಸ್ತಿತ್ವವನ್ನೇ ಕಳೆದುಕೊಳ್ಳುವವರ ಸೂಕ್ಷ್ಮ ಶೋಧನೆಯಿದೆ.

ಇಂತಹ ಗಹನವಾದ ಕಲಾವಂತಿಕೆಯ ಕತೆಯನ್ನು ನಾಟಕ ಪ್ರಕಾರಕ್ಕೆ ಒಗ್ಗಿಸಿ ಪ್ರದರ್ಶಿಸುವುದು ಒಂದು ದೊಡ್ಡ ಸವಾಲು. ಈ ಸವಾಲನ್ನು ಸ್ವೀಕರಿಸಿ ಮೈಸೂರಿನ ದಲಿತ ಕಲಾ ಮಂಡಳಿಯವರು ಕೆ. ಎಸ್. ಶರತ್ ಅವರ ನಿರ್ದೇಶನದಲ್ಲಿ 4-9-86 ರಂದು 'ಮಾರಿಕೊಂಡವರು' ನಾಟಕ ಪ್ರದರ್ಶನ ನೀಡಿದರು. (ಈಗಾಗಲೇ ಈ ನಾಟಕ ನಾಲ್ಕು ಪ್ರದರ್ಶನಗಳನ್ನು ಕಂಡಿದೆ)

ಮೂರನೆಯ ರಂಗಭೂಮಿಯ ಪರಿಕಲ್ಪನೆ ಮತ್ತು ಪರಿಕರಗಳನ್ನು ನಾಟಕದ ವಸ್ತು ಮತ್ತು ನಿಲುವುಗಳಿಗೆ ಪೂರಕವಾಗುವಂತೆ ನಿರ್ದೇಶಕರು ಬಳಸಿದರು. ನಾಟಕದ ಒಂದು ಮುಖ್ಯ ಒತ್ತು ದಾರಿದ್ರ್ಯ ಹೇಗೆ ಅಸ್ತಿತ್ವಹೀನ ಸ್ಥಿತಿಗೆ ಕಾರಣವಾಗುತ್ತದೆ ಎಂಬುದರ ಮೇಲಿದೆ. ಹೀಗೆ ಇದ್ದೂ ಇಲ್ಲದ ಗತಿಸ್ಥಿತಿಗಳೇ ಈ ನಾಟಕದಲ್ಲಿ ಸ್ಥಾಯಿಯಾಗಿದೆ. ಇಂತಹ ಜೀವನವನ್ನು ಅಭಿವ್ಯಕ್ತಿಸಲು ಸಾಂಪ್ರದಾಯಿಕ ರಂಗಪರಿಕರಗಳನ್ನಾಗಲೀ ಬೆಳಕಿನ ಚೆಲ್ಲಾಟವನ್ನಾಗಲೀ ಸಿದ್ಧಪಡಿಸಿದ ಸಂಗೀತವನ್ನಾಗಲೀ ಇತರ ಯಾವುದೇ ಶ್ರೀಮಂತ ತಂತ್ರವನ್ನಾಗಲೀ ಬಳಸದೇ ಇದ್ದುದ್ದು ಸುಸಂಗತವಾಗಿತ್ತು. ನಟರನ್ನೇ ಸೂಚ್ಯವಾಗಿ ಎಲ್ಲದಕ್ಕೂ ಉಪಯೋಗಿಸಿದ್ದು ಕೇವಲ ಒಂದು ತಂತ್ರವಾಗಷ್ಟೇ ಇರದೆ ನಾಟಕದ ತಿರುಳಿನ ಒಂದು ಭಾಗವೇ ಆಗಿತ್ತು.

ನಾಟಕದ ಒಂದೊಂದೇ ಪಾತ್ರದ ಪರಿಚಯ ವಿಭಿನ್ನ ಚಲನೆಗಳು ಮತ್ತು ವಿವಿಧ ರೀತಿಯ ಸಂಗೀತಲಯಗಳ ಮೂಲಕ ನಡೆಯಿತು. ಶೈಲೀಕೃತ ನಡಿಗೆ ಮತ್ತು ಅದಕ್ಕೆ

---

ಎ. ಆರ್. ನಾಗಭೂಷಣ, 1235, ಕೆ. ಎಂ. ಪುರಂ, ಮೈಸೂರು-570 004

ಹೊಂದಿಕೊಳ್ಳುವ ತಮಟೆಯ ಬಡಿತ ಪಾತ್ರಗಳ ಮನಸ್ಸಿನಾಳವನ್ನೇ ತೆರೆದಿಟ್ಟವು. ಸಂಗೀತ, ಶಬ್ದ ಮತ್ತು ಚಲನೆಗಳಿಗೂ ಪಾತ್ರಗಳ ಮನೋವ್ಯಾಪಾರಕ್ಕೂ ರಂಗಭೂಮಿಯಲ್ಲಿ ಇರುವ ಅನ್ಯೋನ್ಯ ಸಂಬಂಧವನ್ನು ನಿರ್ದೇಶಕರು ಹೀಗೆ ಸಮರ್ಥವಾಗಿ ಗುರುತಿಸಿದರು.

ಜಾನಪದ ಶೈಲಿಯ ಸಂಗೀತ ಘಟನೆಗಳ ನಿರೂಪಣೆ ಮತ್ತು ವ್ಯಾಖ್ಯಾನಗಳನ್ನು ಪರಸ್ಪರ ತೊಡಕಾಗದಂತೆ ಮಾಡಿತು. ಬೀರ-ಲಕ್ಷ್ಮಿಯರ ಬದುಕಿನ ಏರಿಳಿತಗಳನ್ನು ಪದಗಳಿಗಿಂತ ಹೆಚ್ಚಾಗಿ ಲಯದ ಮೂಲಕ ಬಿಚ್ಚಿಟ್ಟಿತು. (ಗೋವಿಂದಯ್ಯನವರ ಹಾಡುಗಳನ್ನು ವರದಯ್ಯ ಮತ್ತಿತರರು ಹಾಡಿದರು)

ಅಮೂರ್ತವಾದದ್ದನ್ನು ಕಣ್ಣಿಗೆ ಕಾಣುವ ಹಾಗೆ ರಂಗದ ಮೇಲೆ ಮೂರ್ತೀಕರಿಸುವುದು ನಿರ್ದೇಶಕನ ತೊಡಕಿನ ಕೆಲಸ—ಏಕೆಂದರೆ ಮೂರ್ತವಾದೊಡನೆಯೇ ಒಂದು ಅನುಭವದ ಸಂಕೀರ್ಣತೆ ತೆಳುವಾಗಿ ಬಿಡುವ ಅಪಾಯ ಯಾವತ್ತೂ ಇದೆ. 'ಮಾರಿಕೊಂಡವರು' ನಾಟಕದಲ್ಲಿ ಲಕ್ಷ್ಮಿ ಕಾಣುವ ಕನಸು ಅತ್ಯಂತ ಗಾಢವಾದದ್ದು, ಗೊಂದಲಮಯವಾದದ್ದು. ಇದನ್ನು ಶೈಲೀಕೃತ ವೃತ್ತದ ಮೂಲಕ ವ್ಯಕ್ತಪಡಿಸಿ, ಕನಸಿನ ಸಂಕೀರ್ಣತೆಯನ್ನು ಸ್ವಲ್ಪವೂ ನಷ್ಟ ಪಡಿಸದೆ ಸನ್ನಿವೇಶದ ಪರಿಣಾಮವನು ನಿರ್ದೇಶಕರು ಹೆಚ್ಚಿಸಿದರು.

ಮಾತಿನ ಮೇಲೆಯೇ ನಾಟಕವನ್ನು ಕಟ್ಟಿ ಮಾತನ್ನು ಮೀರಬೇಕಾದ್ದು ನಾಟಕದ ಮೂಲ ತತ್ವಗಳಲ್ಲೊಂದು. ಮಾತಲ್ಲಿ ಧ್ವನಿಸಲಾಗದ್ದನ್ನು ಮೌನದ ಮೂಲಕ ಸಂವಹನಿಸಬೇಕಾದರೆ ಪೂರಕವಾದ ಸನ್ನಿವೇಶವನ್ನು ನಿರ್ದೇಶಕರು ಗಟ್ಟಿಯಾಗಿ ಕಟ್ಟಿರಬೇಕು ಇಂತಹ ಅಪರೂಪವಾದ, ಆಳವಾದ ಅನುಭವ 'ಮಾರಿಕೊಂಡವರು' ನಾಟಕದ ಕೊನೆಯಲ್ಲಿ ಎದುರಾಗುತ್ತದೆ. ಲಕ್ಷ್ಮಿ ಕನಸು ಕಂಡ ಮೇಲೆ, ಕಿಟ್ಟಪ್ಪ ಬೀರನ ಗುಡಿಸಿಲಿಗೆ ಬರುತ್ತಾನೆ ; ಆಗ ಬೀರನ ಕೈಯಲ್ಲಿ ಮಚ್ಚಿರುತ್ತದೆ. ಆ ಮುಹೂರ್ತದಲ್ಲಿ ಏನು ಘಟಿಸುವುದೂ ಶಕ್ಯ ; ಆದರೆ ಏನೂ ಘಟಿಸುವುದಿಲ್ಲ. ಇಲ್ಲಿ ನಿರ್ದೇಶಕರು ದೀರ್ಘ ಮೌನವನ್ನು ಬಳಸಿದ್ದಾರೆ. ತನ್ನ ಜೀವನವನ್ನು ಕಿಟ್ಟಪ್ಪ ಧೂಳೀಪಟ ಮಾಡುತ್ತಿದ್ದಾನೆಂಬ ಅರಿವಿದ್ದು, ಕೈಯಲ್ಲಿ ಮಚ್ಚಿದ್ದೂ ನಿರ್ವೀರ್ಯನಾಗಿಬಿಡುವ, ತನ್ನನ್ನು 'ಮಾರಿ' ಕೊಳ್ಳುವ ಬೀರನ ಅಸಹಾಯಕ ಸ್ಥಿತಿ ಮೌನದಿಂದ ಇನ್ನಷ್ಟು ಎತ್ತರಕ್ಕೆ ಹೋಗುತ್ತದೆ

ಹೆಂಡ ಮತ್ತು ಕಂಬಳಿ ಮೂಲಕತೆಯ ಎರಡು ಪ್ರಮುಖ ಸಂಕೇತಗಳು. ಹೆಂಡ ಲಕ್ಷ್ಮಿಯ ಬದುಕನ್ನು ಧ್ವಂಸ ಮಾಡಿದ ಪರೋಕ್ಷ ವಸ್ತುವಾದರೆ, ಕಂಬಳಿ ಕಿಟ್ಟಪ್ಪ ಲಕ್ಷ್ಮಿಯ ಮೈ ಮತ್ತು ಜೀವನದ ಮೇಲೆ ಚಲಾಯಿಸುವ ಅಧಿಕಾರವನ್ನು ಧ್ವನಿಸುತ್ತದೆ. ಕತೆಯಲ್ಲಿ ಕಿಟ್ಟಪ್ಪ ಲಕ್ಷ್ಮಿಯನ್ನು ಕೂಡಿದ ದಿನಕ್ಕೆ ಮುಂಚೆ ಎಂದೋ ಒಂದು

ದಿನ ಕಂಬಳಿಯನ್ನು ತಂದುಕೊಟ್ಟಿರುತ್ತಾನೆ; ಅದನ್ನು ಅವಳು ಆಸೆಯಿಂದ ಎಳೆದುಕೊಂಡಿರುತ್ತಾಳೆ. ಆದರೆ ನಾಟಕದಲ್ಲಿ ಲಕ್ಷ್ಮಿಯನ್ನು ಬಳಸಿಕೊಂಡ ಮಾರನೆಯ ದಿನ ಕಿಟ್ಟಪ್ಪ ಕಂಬಳಿಯನ್ನು ತಂದುಕೊಡುತ್ತಾನೆ; ಅದನ್ನು ಅವಳು ರಭಸದಿಂದ ಹೊದ್ದುಕೊಳ್ಳುತ್ತಾಳೆ. ಇದು ಲಕ್ಷ್ಮಿಯ ಮನೋಭೂಮಿಕೆಯ ದೃಷ್ಟಿಯಿಂದ ಅಸಹಜತೆಗೆ ಕಾರಣವಾದಂತೆ, ಕಂಬಳಿಯ ಸಾಂಕೇತಿಕ ಮೌಲ್ಯಕ್ಕೂ ಧಕ್ಕೆ ತಂದಿದೆ. (ನಟರನ್ನು ತರಬೇತುಗೊಳಿಸುತ್ತಲೇ ಅವರಿಂದ ದೃಶ್ಯಾವಳಿಗಳನ್ನು ನಿರ್ಮಿಸಿದ್ದರಿಂದ ಪ್ರಾಯಶಃ ಈ ತೊಂದರೆಯಾಗಿರಬಹುದು)

ಬಡತನ, ಅಸಹಾಯಕತೆ, ಮುಗ್ಧತೆಗಳ ಪ್ರತಿರೂಪವಾದ ಬೀರ-ಲಕ್ಷ್ಮಿಯಾಗಿ, ನಂಜುಂಡಸ್ವಾಮಿ ಮತ್ತು ದೀಪಲಕ್ಷ್ಮಿ, ಊಳಿಗಮಾನ್ಯ ವ್ಯವಸ್ಥೆಯ ಪಾಲುದಾರನೂ ಪಟ್ಟಣದ ಕೊಳಕನ್ನೇ ಮೌಲ್ಯವಾಗಿ ಸ್ವೀಕರಿಸಿದವನೂ ಆದ ಕಿಟ್ಟಪ್ಪನಾಗಿ ಸಂಬಯ್ಯ ತಮ್ಮ ಪಾತ್ರಗಳನ್ನು ನಿಷ್ಠೆಯಿಂದ ನಟಿಸಿದರು. ಯಾವ ರಂಗದಲ್ಲಾಗಲೀ ಬೀದಿಯಲ್ಲಾಗಲೀ ನಟಿಸಲು ಸಾಧ್ಯವಿರುವಂತೆ ಯೋಜಿಸಿರುವ "ಮಾರಿಕೊಂಡವರು" ಅನೇಕ ದೃಷ್ಟಿಗಳಿಂದ ಮೈಸೂರಿನಲ್ಲಾದ ಅಪರೂಪವಾದ ನಾಟಕ. ಅಬ್ಬರವಿಲ್ಲದ ಸೂಕ್ಷ್ಮ ನಿರ್ದೇಶನ, ಶಿಸ್ತುಬದ್ಧ ನಟನೆ, ಅಚ್ಚುಕಟ್ಟಾದ ಚಲನೆ, ಸುಶ್ರಾವ್ಯವಾದ ಸಂಗೀತ ಇತ್ಯಾದಿಗಳು ಒಂದಕ್ಕೊಂದು ಪೂರಕವಾಗಿ ಅಮಾನವೀಯವಾದ ಬದುಕಿನ ಪರಿಯನ್ನು ಸಮರ್ಥವಾಗಿ ತೆರೆದಿಟ್ಟವು.

## ಮಳೆರಾಯ

ಎಂಥ ಮೋಡಿ ಕಾರನೆ ಅವನು
ಮಳೆರಾಯ ನೆಂಬುವನು
ಹೆಂಡೊಡಲ ಭೂಮಿಯಲ್ಲಿ
ಹೊಸಜೀವ ತಂದವನು

ಉಬ್ಬಸವಿಡುವ ನಿಂತ
ತೆಂಗು ಮರಗಿಡಗಳನು
ತಂಗಾಳಿಯಲೆಯಲ್ಲಿ
ತವಗಿದವನು

ಡಾ॥ ಕೆ. ಆರ್. ಸಂಧ್ಯಾರೆಡ್ಡಿ, ನಂ.588 (ಮಹಡಿ ಮನೆ), ಭವಾನಿನಗರ, ಗವಿಪುರ ಬಡಾವಣೆ, ಬೆಂಗಳೂರು-560019

ಕೊಂಬೆ ರೆಂಬೆಗಳಲ್ಲಿ
ಸಾಲುಕುಂತ
ಗಿಳಿಗುಬ್ಬಿಗಳಿಗೆಲ್ಲ
ಜೋಕಾಲಿ ಸುಖ
ಉಣಿಸಿದವನು

ಪಟ ಪಟನೆ ಹನಿಯುತ್ತ
ಚಿಣ್ಣರೆದೆಯಲ್ಲಿ
ಹರುಷದ ನವಿಲು
ಕುಣಿಸಿದವನು

ತಂಪು ಹನಿಯಿಂದ
ವಿರಹಿಗಳೆದೆ ಉರಿಯು
ಭಗ್ಗನುರಿಸಿದವನು

ಮಿಂಚು ನೋಟ ಮೇಲು ಗುಡುಗು
ದನಿಯಿಂದ
ಭುವಿಗೆಲ್ಲ
ಪುಳಕತಂದವನು

ಹೊಳೆವ ಹಸಿರು ಹಕ್ಕಿ
ಭೂಗಂಧ ಹಕ್ಕಿ ಹಾಡು
ಗಾಳಿಯಲಿ ಬೆರೆತು
ಎಲೆಗಳಂಚಿಂದ ಹೂದಳಗಳಿಂದ
ಹಕ್ಕಿಗಳ ಗರಿಯಿಂದ

ಸುಖದ ಪನ್ನೀರು
ತೊಟ್ಟಿಕ್ಕುವುದ ನೋಡುತ್ತಾ
ಮೈಮರೆತು ನಿಂದವನು

ಎಂಥ ಮೋಡಿಕಾರನೆ ಅವನು
ಮಳೆರಾಯನೆಂಬುವನು
ಬೆಂದೊಡಲ ಭುವಿಗೆ
ಸಂತೈಕೆ ಹಾಡುಹಾಡಿದವನು
ಬೆಂದೊಡಲ ಭುವಿಯಲ್ಲಿ
ಸುಖದ ಸಿರಿತಂದವನು

ಕೆ. ಆರ್. ಸಂಧ್ಯಾರೆಡ್ಡಿ

# ಒಳನೋಟ

ಒಂದೇ ಕುಲದ ವರ್ಗ :

ಇಂದಿನ ಭಾರತದಲ್ಲಿ ಹಿಂದುಳಿದಿರುವವರ್ಯಾರು ಎಂಬ ತೀರ್ಮಾನಕ್ಕೆ ಬರುವಲ್ಲಿ ಹಿಂದಿನ ದಿನಗಳ ಭಾರತೀಯನ ಅಸ್ಪೃಶ್ಯ-ಶೂದ್ರರುಗಳು ಕಣ್ಮುಂದೆ ಬರುವುದು ಸಹಜ.

ಕಾಶಿಕ್ಷೇತ್ರದಲ್ಲಿ ಶಂಕರಾಚಾರ್ಯರನ್ನು ಕುರಿತು ಚಂಡಾಲನ ನುಡಿ :

ನನ್ನ ನಿಮ್ಮ ದೇಹಗಳು ಅನ್ನಮಯವಾಗಿರುವುದರಿಂದ ಇಬ್ಬರ ದೇಹದಲ್ಲೂ ರಕ್ತ ಮಾಂಸ ಮೂತ್ರ ಮೊದಲಾದುವುಗಳೆಲ್ಲಾ ಇವೆ. ನಮ್ಮ ಆತ್ಮಗಳು ಆನಂದ ಸ್ವರೂಪವಾದವು. ಚಂಡಾಲನ ಪಾತ್ರೆಯ ನೀರಿನಲ್ಲಿ ಪ್ರತಿಬಿಂಬಿತನಾದ ಸೂರ್ಯ ನಿಮ್ಮ ಕೈಪಾತ್ರೆಯಲ್ಲಿನ ನೀರಿನ ಪ್ರತಿ ಬಿಂಬಕ್ಕಿಂತ ಭಿನ್ನವಾಗಿ ತೋರಿಯಾನೆ ?

ಚಂಡಾಲನ ವೈಜ್ಞಾನಿಕ ದೃಷ್ಟಿ ಅರ್ಥಮಾಡಿಕೊಳ್ಳಲು ಕಷ್ಟವಲ್ಲದಿದ್ದರೂ ಒಪ್ಪಿಕೊಳ್ಳಲು ಒಲ್ಲದ ಮನಸ್ಸನ್ನು ಪಡೆದವರನ್ನು ಬದಲಾಯಿಸುವ ಪ್ರಯತ್ನ ಶತ ಶತಮಾನಗಳಿಂದಲೂ ನಡೆದು ಬಂದಿದೆ.

ಹನ್ನೆರಡನೆ ಶತಮಾನದ ಹಿಂದಿನಿಂದಲೂ ವೀರಶೈವ ಧರ್ಮದಲ್ಲಿ ಸ್ತ್ರೀಯರಿಗೂ ಶೂದ್ರರಿಗೂ ವೃತ್ತಿ, ವ್ಯಕ್ತಿ ಮತ್ತು ವಾಕ್ ಸ್ವಾತಂತ್ರ್ಯಗಳನ್ನು ದೊರಕಿಸಿಕೊಡಲು ಪ್ರಾಮಾಣಿಕ ಪ್ರಯತ್ನಗಳು ನಡೆದಿವೆ. ಹನ್ನೆರಡನೇ ಶತಮಾನವನ್ನು ಸ್ವತಂತ್ರಯುಗ ವೆಂದು ಕರೆದರು. ಅಂತು ಹಿಂದಿನಿಂದ ಬಂದ ಮುಗ್ಧ ಪದ್ಧತಿಗಳ ಸಂಕೋಲೆಗಳಿಂದ ಬಿಡಿಸಿಕೊಳ್ಳಲು ಎಲ್ಲ ಹಿಂದುಳಿದ ವರ್ಗಗಳಿಗೂ ವಿಚಾರ ಸ್ವಾತಂತ್ರ್ಯತೆ ದೊರಕಿತು. ಆ ಸಂದರ್ಭದಲ್ಲಿ ವೀರಶೈವರನ್ನು ಹಿಂದೂಗಳಲ್ಲವೆಂದು ಪಟ್ಟಿ ಮಾಡಲು ಪ್ರಯತ್ನ ಪಟ್ಟ ಘಟನೆಗಳಿವೆ.

ಡಾ॥ ರಾಧಾಕೃಷ್ಣನ್ ತಮ್ಮ ಇಂಡಿಯನ್ ಫಿಲಾಸಫಿಯಲ್ಲಿ ತಿಳಿಸುವಂತೆ—

The Original Aryans all belonged to one class every one being a priest and soldier, trader and

tiller of the soil. There was no previleged order of priests. The Complexity of life led to a division of classes among the Aryans. Though to start with, each could offer sacrifices to Gods without any-body's mediation. Priest hood and aristocracy sepera-ted themselves from the Prole tariat.

ಕಾಂಪ್ಲೆಕ್ಸಿಟಿ ಆಫ್‌ಲೈಫ್ ಇಂದಿನ ಭಾರತದಲ್ಲಿ ಮತ್ತಷ್ಟು ಹೆಚ್ಚಿಸುವ ಕಾರ್ಯಕ್ಕೆ ಬದಲಾಗಿ ಸರಳಗೊಳಿಸುವ ಸೂತ್ರಗಳು ಬಡತನ ನಿವಾರಣೆಗೆ ಸಹಕಾರಿಯಾಗುತ್ತವೆ. ಒಟ್ಟಿನಲ್ಲಿ ಜನ್ಮಕ್ಕೆ ಜಾತಿಗೆ ಪ್ರಾಮುಖ್ಯತೆ ಕೊಡದೆ ಆರ್ಥಿಕವಾಗಿ ಹಿಂದುಳಿದವರಿಗೆಲ್ಲಾ ಒಂದೇ ಕುಲಕ್ಕೆ ಸೇರುವರೆಂಬುದನ್ನು ಮನಗಾಣಬೇಕಾದ ದಿನ ಬಂದಿದೆ.

ಬೆಂಗಳೂರು — ಎಲ್. ರುದ್ರಸ್ವಾಮಿ

ಪ್ರಿಯ ಶ್ರೀನಿವಾಸ್,

ವಂದನೆಗಳು, ನೀವು ವಿಶ್ವಾಸದಿಂದ ಕಳಿಸಿದ 'ಶೂದ್ರ'ದ ಸಂಚಿಕೆ ಸೇರಿ ಸಂತೋಷವಾಯಿತು. "ಕನಸಿಗೊಂದು ಕಣ್ಣು"–ನನಗೆ ತುಂಬ ಹಿಡಿಸಿತು. ಅಲ್ಲಿ ಕಣ್ಣನ್ನು 'ತೆರೆಸುವ' ಕಣ್ಣುಗಳಿಗೆ ಕನಸನ್ನುಣಿಸುವ ನಿಮ್ಮ ಬರಹ ತುಂಬ ಸಂತೋಷ ನೀಡಿತು. ಹಾಗೆಯೇ ಗಾಯಿತ್ರಿ, ಸುಚೇತನ ಸ್ವರೂಪ, ಮಮತ, ಮಾಲತಿ ಅವರ ಕವನಗಳು ಸಿದ್ಧರಾಮಯ್ಯನವರ ಕಾವ್ಯ–ಪತ್ರಿಕೆಯ ರಸವಂತಿಕೆಗೆ ಸಾಕ್ಷಿ. ಬಿದಿರಹಳ್ಳಿ ನರಸಿಂಹಮೂರ್ತಿಯವರ ಲೇಖನ ಇಷ್ಟವಾಯಿತು.

ನಿಮ್ಮ

ಬೆಂಗಳೂರು — ಸು. ರಂ. ಎಕ್ಕುಂಡಿ

# ಸುದ್ದಿಯ ಗಂಡ್ಡಾಟ

## ಪ್ರೊ. ಎಸ್. ಗೋಪಾಲ್

ಐದಾರು ವರ್ಷಗಳ ಹಿಂದೆ 'ದಿ ಮೈಂಡ್ ಆಫ್‌ನೆಹ್ರೂ' ಕೃತಿಯನ್ನು ಓದಿದಾಗ ಡಾ॥ ಸರ್ವಪಲ್ಲಿ ಗೋಪಾಲ್ ಬಗ್ಗೆ ಎಲ್ಲಿಲ್ಲದ ಅಭಿಮಾನ ಮೂಡಿತ್ತು, ಇದರ ನಂತರ ನನಗೆ ತುಂಬ ಇಷ್ಟವಾದ ಮತ್ತೊಂದು ಪುಸ್ತಕವೆಂದರೆ 'ರಾಜಾಜಿ'ಯನ್ನು ಕುರಿತು ಬರೆವದ್ದು.

ಡಾ॥ ಗೋಪಾಲ್‌ರವರು ಜವಾಹರ್‌ಲಾಲ್‌ನೆಹ್ರೂ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿದ್ದು ಇತ್ತೀಚೆಗೆ ನಿವೃತ್ತರಾಗಿರುವ ಅತ್ಯಂತ ಪ್ರತಿಭಾವಂತ ಇತಿಹಾಸ ಕಾರ. (ಮಾಜಿ ರಾಷ್ಟ್ರಪತಿ ಸರ್ವಪಲ್ಲಿ ರಾಧಾಕೃಷ್ಣನ್‌ರವರ ಮಗ) ಗಾಂಧೀಜಿಯವರ ತತ್ವಗಳನ್ನು ಗಾಢವಾಗಿ ಅಧ್ಯಯನ ಮಾಡಿ ಅಷ್ಟೇ ಸಮರ್ಪಕವಾಗಿ ಮಾತಿನಲ್ಲಿ ಮತ್ತು ಬರವಣಿಗೆಯಲ್ಲಿ ಹಿಡಿದಿಡಬಲ್ಲ ಸಾಮರ್ಥ್ಯವನ್ನು ಹೊಂದಿರುವ ವ್ಯಕ್ತಿ.

ಇತ್ತೀಚೆಗೆ ಬೆಂಗಳೂರು ವಿಶ್ವವಿದ್ಯಾಲಯದವರು ಯು. ಜಿ. ಸಿ. ಯ ಸಹಾಯಧನದಿಂದ ರಾಷ್ಟ್ರೀಯ ಮಟ್ಟದ ವಿಚಾರಸಂಕಿರಣವನ್ನು ಏರ್ಪಡಿಸಿತ್ತು. ವಿಷಯ: 'ಸ್ವಾತಂತ್ರ್ಯ ಆಂದೋಲನ' ಇದಕ್ಕೆ ಬೇರೆ ಬೇರೆ ವಿಶ್ವ ವಿದ್ಯಾಲಯ ಗಳಿಂದ ಕೆಲವು ಮಹಾನ್ ಇತಿಹಾಸ ಪಂಡಿತರು ಬಂದಿದ್ದರೂ: ಯಾರೂ ಸರ್ವಪಲ್ಲಿ ಗೋಪಾಲ್‌ರವರಷ್ಟು ತೂಕದ ವ್ಯಕ್ತಿ ಇರಲಿಲ್ಲ. (ಸ್ವಲ್ಪ ಮಟ್ಟಿಗೆ ಪ್ರೊ. ಬಿಪಿನ್ ಚಂದ್ರರವರನ್ನು ಬಿಟ್ಟು) ಇದೇನೆ ಆಗಿರಲಿ ಒಟ್ಟು ಸಂಕಿರಣವನ್ನು ಸಂಘಟಿಸಿದ ಕ್ರಮ ಅಸಹ್ಯವಾಗಿತ್ತು. ಕೊನೆಯಪಕ್ಷ ಪ್ರೊ. ಗೋಪಾಲ್‌ರವರ ಬಗ್ಗೆ ಹಾಗೂ ಬಿಪಿನ್ ಚಂದ್ರರವರ ಬಗ್ಗೆ ಪ್ರತ್ಯೇಕವಾದ ಪತ್ರಿಕಾ ಹೇಳಿಕೆಯನ್ನು ನೀಡಿ ಬರ ಮಾಡಿಕೊಳ್ಳಬಹುದಾಗಿತ್ತು. ಇವರ ಭಾಷಣವನ್ನು ಪತ್ರಿಕೆಗಳು ಸುದ್ದಿಮಾಡಲಿಲ್ಲ. ನಮ್ಮ ಪತ್ರಿಕೆಯವರಿಗೆ ಎಷ್ಟೋ ಮುಖ್ಯ ವಿಷಯಗಳು ಸುದ್ದಿಯ ದೃಷ್ಟಿಯಿಂದ ಮುಖ್ಯವೆನ್ನಿಸುವುದಿಲ್ಲ. ಒಟ್ಟಿನಲ್ಲಿ ಪ್ರೊ. ಗೋಪಾಲ್ ಬಿಕೋ ಎನ್ನುತ್ತಿದ್ದ ಸೆನೆಟ್ ಹಾಲ್ ಸಭಾಂಗಣಕ್ಕೆ ಅತ್ಯಂತ ಆತ್ಮೀಯತೆಯಿಂದ 'ಗಾಂಧಿ ಮತ್ತು ನೆಹ್ರೂ'ರವರನ್ನು ದೃಷ್ಟಿಯಲ್ಲಿಟ್ಟುಕೊಂಡು ಮಾತಾಡಿದರು. ಇದೊಂದು ಸ್ಮರಣೀಯ ಭಾಷಣ. ಆದರೆ ಈ ಕಾರ್ಯಕ್ರಮ ಆದ ಮೇಲೆ ಗೋಪಾಲ್ ಬಂದು ಹೋದ ವಿಷಯ ತಿಳಿದು ಬಹಳಷ್ಟು ಜನ ಪರದಾಡಿದರು. ಏನೇ ಆಗಲಿ ನಮ್ಮಲ್ಲಿ ಬಹುಪಾಲು ಸಂಸ್ಥೆಗಳು ಲೇಕ್ಕಕ್ಕೆ ಮಾತ್ರ ಕಾರ್ಯಕ್ರಮ ಮಾಡುತ್ತಾರೆ. ಅದರ ಒಟ್ಟು ಸಾರ್ಥಕತೆಗಾಗಿ ಅಲ್ಲ.



# ಕನಸಿಗೊಂದು ಕಣ್ಣು

## ಅದೇ ಜನ ಅದೇ ಬದುಕು

ನೂರಾರು ಕಿ.ಮೀಟರು ಹೋದರೂ ಅದೇ ಬಿಸಿ: ಬೆಂದ ನೆಲದೊಡಲಿನಿಂದ ಮೇಲಕ್ಕೇರುವ ಬಿಸಿ. ಆ ಬಿಸಿಯನ್ನು ಸಹಿಸಿಕೊಂಡು ಕಪ್ಪುಗೊಂಡ ರಕ್ತಹೀನ ಮುಖಗಳು. ಮೇ ತಿಂಗಳಲ್ಲಿ ನಡೆದ ಬಸವ ಜಯಂತಿಯ ಸಂದರ್ಭದಲ್ಲಿ ವಿಜಾಪುರ ಜಿಲ್ಲೆಯಲ್ಲಿ ಕಂಡ ದೃಶ್ಯ. ಅದರಲ್ಲೂ ನಮ್ಮ ಸಾಂಸ್ಕೃತಿಕ ನಾಯಕನಾದ ಬಸವಣ್ಣನ ತವರೂರಾದ ಬಸವನ ಬಾಗೇವಾಡಿಯ ಸುತ್ತ ಮುತ್ತ ನೋಡಿದಾಗ ಹೃದಯ ದಸಕ್ಕೆಂದಿತು. ಆದರೂ ಬೂದಿಗೊಂಡ ನೆಲದಲ್ಲಿ ಕಚ್ಚಿಕೊಂಡುನಿಂತ ಬಸವಂತ (ಕಳೆದ ಸಂಚಿಕೆಯಲ್ಲಿಯ ಕನಸಿಗೊಂದು ಕಣ್ಣಿನ) ನಂಥ ಮುಖಗಳು ನಾನಾ ರೀತಿಯಲ್ಲಿ ಹಂಚಿ ಹೋಗಿದ್ದಾರೆ. ಹಾಗೆಯೇ ಈ ನೆಲದ ಸಂಬಂಧಗಳನ್ನು ಬಿಟ್ಟು ಹೊಟ್ಟೆ ಬಟ್ಟೆಗಾಗಿ ದೂರ ಓಡಿಹೋಗಿ ನಗರಗಳಲ್ಲಿಯ ಕೊಳಚೆ ಪ್ರದೇಶಗಳಲ್ಲಿ ಬದುಕುವವರಿಗೆ ಕೊರತೆಯಿಲ್ಲ. ಅವರೆಲ್ಲ ಅಪರೂಪಕ್ಕೆ ಊರಿಗೆ ಹೋದಾಗ ಸ್ವಲ್ಪಮಟ್ಟಿಗೆ ಶುಭ್ರವಾದ ಬಟ್ಟೆಯನ್ನು ಧರಿಸಿ ಹೋಗುತ್ತಾರೆ. ಆ ಬಟ್ಟೆಯೂ ಸಹ ನಗರಗಳಲ್ಲಿಯ ಹಳೆಯ ಬಟ್ಟೆಯಂಗಡಿಗಳಲ್ಲಿ ಕೊಂಡ ಬಟ್ಟೆ. ಕೆಟ್ಟು ಪಟ್ಟಣ ಸೇರಿದ ಬಹುತೇಕ ಮಂದಿ ಸುಖದ ಸಂಪತ್ತಿಗೆಯನ್ನಂತೂ ಏರಿರುವುದಿಲ್ಲ. ಆದರೆ ನಾವು ಕೆಟ್ಟಿದ್ದೇವೆ ಎಂದು ತೋರಿಸಿಕೊಳ್ಳಲು ಪ್ರಯತ್ನಿಸುವುದಿಲ್ಲ. ಮತ್ತೊಂದು ದಿಕ್ಕಿನಲ್ಲಿ ನೂರಾರು ಕಿ.ಮೀಟರಿನಷ್ಟು ದೂರ ಹೋದರೂ ಹಚ್ಚಹಸಿರನ್ನು ಹೊಂದಿರುವ ದಕ್ಷಿಣ ಕನ್ನಡ ಮತ್ತು ಉತ್ತರ ಕನ್ನಡ. ಮತ್ತೆ ಮತ್ತೆ ನೋಡಿ ದೃಷ್ಟಿಯನ್ನು ಗಟ್ಟಿಗೊಳಿಸಿಕೊಳ್ಳುವ ಆಸೆ. (ವೈದ್ಯಕೀಯ ದೃಷ್ಟಿಯಿಂದ ಹಸಿರು ದೃಷ್ಟಿಯನ್ನು ಮಂದಗೊಳಿಸುವುದಿಲ್ಲ ಎಂಬ ನಂಬಿಕೆ—ನಿಜವೂ ಇರಬಹುದು), ಆದರೆ ಆ ಬೀದರಿನ ಆ ವಿಜಾಪುರದ ಹಾಗೂ ಮತ್ತಿತರ ಜಾಗದ ಜನರನ್ನು ಸಾವಿರಾರು ವರ್ಷಗಳಿಂದ ಬಿಸಿಯ ಬೂದಿಯಲ್ಲಿಟ್ಟವರು ಯಾರು? ಪ್ರಕೃತಿಯೆ ಅಥವಾ ಆಳುವ ವರ್ಗವೆ? ಎಂಬ ಪ್ರಶ್ನೆ ಮುಂದೆ ನಿಲ್ಲುತ್ತದೆ. ಇದನ್ನು ಬಿಡಿಸಿ ಉತ್ತರ ಕಂಡುಕೊಳ್ಳಲು ನಿಜವಾಗಿಯೂ ಹೋಗುತ್ತಿಲ್ಲ, ಮನುಷ್ಯನು ಎಂಥ ಭೀಕರ ಸವಾಲುಗಳನ್ನ ಬೇಕಾದರೂ ಎದುರಿಸಬಲ್ಲ. ಎಂಥಾ ಬೆಂಗಾಡನ್ನಾದರೂ ನಂದನವನವನ್ನಾಗಿ ಪರಿವರ್ತಿಸಬಲ್ಲ ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ, ಹೀಗೆ ಹೇಳುವಾಗ ಜನತೆ ಯಾಕೆ ಸಾಯಬೇಕು? ಅವರಿಗೆ ತಮ್ಮ ತಮ್ಮ ನೆಲದಲ್ಲಿ

ಬಂಧು ಬಳಗದ ಜೊತೆ ಪ್ರೀತಿ ಪ್ರೇಮವನ್ನ ಅಪ್ಪಿಕೊಂಡು ಬದುಕಲು ಸಾಧ್ಯವಿಲ್ಲವಾ ಅನ್ನಿಸುತ್ತೆ. ಈ ಟಿಪ್ಪಣಿಯನ್ನು ಬರೆಯುವ ಸಮಯಕ್ಕೆ ನನ್ನ ಮಾರ್ಕ್ಸ್‌ವಾದಿ ಗೆಳೆಯ ವೀರಯ್ಯ ಸಿಕ್ಕಿದ್ದ. ಮಾತಿನ ನಡುವೆ ತನ್ನ ತವರು ಜಿಲ್ಲೆಯಾದ ಚಿತ್ತೂರಿನ ಬಗ್ಗೆ ಮಾತಾಡುತ್ತಾ ಇನ್ನೂ ಐವತ್ತು ವರ್ಷಗಳಾದರೆ ಚಿತ್ತೂರು, ಕಡಪ ಮತ್ತು ಅನಂತಪುರ ಜಿಲ್ಲೆಗಳು, ಭೂಗರ್ಭ ಶಾಸ್ತ್ರಜ್ಞರ ಪ್ರಕಾರ ಮರಳುಗಾಡಾಗುತ್ತವೆಯಂತೆ ಎಂದಾಗ ಗಾಬರಿಯಾಯಿತು. ಈ ಮಾತು ಹೇಳುವಾಗ ವೀರಯ್ಯನ ಮನಸ್ಸಿನಲ್ಲಿ ಆತಂಕವಿತ್ತು. ನಮ್ಮ ಜನರನ್ನು ಕೊನೆಗೂ ಯಾರು ಸುಖವಾಗಿಡಬೇಕು ? ಹಾಗೆ ನೋಡಿದರೆ ಆಂಧ್ರದ ಜನಪ್ರಿಯ ಮುಖ್ಯಮಂತ್ರಿಯಾಗಿದ್ದ, ನಂತರ ರಾಷ್ಟ್ರಪತಿಯಾಗಿದ್ದ ಸಂಜೀವ ರೆಡ್ಡಿಯವರು ತಮ್ಮ ತವರು ಜಿಲ್ಲೆಯಾದ ಅನಂತಪುರವನ್ನು ಮಾಮೂಲಿ ಸ್ಥಿತಿಯಲ್ಲಿಯೇ ಉಳಿಸಿಕೊಂಡಿದ್ದಾರೆ. ನಮ್ಮಲ್ಲಿ ಬಹಳಷ್ಟು ಮಂದಿ ವೈಯಕ್ತಿಕವಾಗಿ ಗಾಂಧೀವಾದಿಗಳಾಗುತ್ತಾರೆ ಆದರೆ ಕಾರ್ಯಕ್ರಮದ ಅನುಷ್ಠಾನವಲ್ಲಿ ಆಗಿರುವುದಿಲ್ಲ. ಕುಡಿಯಲು ನೀರಿಲ್ಲದೆ, ತಿನ್ನಲು ರೊಟ್ಟಿಯಿಲ್ಲದೆ ಬಿಸಿಯಲ್ಲಿ ಬೇಯುತ್ತಿರುವ ಜನರನ್ನು ಪಕ್ಕದಲ್ಲಿಟ್ಟುಕೊಂಡು ನಾವು ಆಡುವ ರಾಜಕೀಯ ದೊಂಬರಾಟಕ್ಕೆ ಯಾವರೀತಿಯ ತಾತ್ಪರ್ಯವನ್ನು ಕೊಡದೆ ಒಟ್ಟು ವಿಷಯದ ಕನಸಿಗೆ ಬರುವೆ. ಈ ಕನಸಿನ ಕಣ್ಣುಗಳು ಪ್ರಕಾಶಮಾನವಾಗಿವೆಯೇ ಅಥವಾ ಮಬ್ಬುಗತ್ತಲಿನಲ್ಲಿ ಮಿಂಚುಹುಳುಗಳ ಚೈತನ್ಯಪೂರ್ಣ ಆಕಸ್ಮಿಕ ಬೆಳಕು ಎಷ್ಟು ಮಾತ್ರ ಪೂರಕ ಎಂಬುದನ್ನ ನೋಡಬೇಕಾಗಿದೆ. ಒಂದು ಕಾಲಕ್ಕೆ ಕನಸುಗಳೂ ಸಹ 'ಮಿಥ್'ಗಳಾಗಿ ಉಳಿದುಬಿಡುವ ಭಯವಿದೆ.

ಹೊಟ್ಟೆಬಟ್ಟೆಗಾಗಿ ನೂರಾರು ಮೈಲಿ ಹೋಗುವವರನ್ನು ಕಂಡರೆ ಆಶ್ಚರ್ಯವಾಗುತ್ತೆ. ನಾವು ವಿದ್ಯಾವಂತರು ಉತ್ತಮ ಕೆಲಸವನ್ನು ಹುಡುಕಿ ಹೋಗುವವರನ್ನು ಪ್ರಸ್ತಾಪಿಸಲು ಬಯಸುತ್ತಿಲ್ಲ. ಏನೂ ಅರಿಯದ ಮುಗ್ಧ ಜನರ ಅಲೆದಾಟಕ್ಕೆ ನಿಜವಾದ ನೋವಿದೆ ಎಂಬುದನ್ನು ಯಾರು ಅಲ್ಲಗಳೆಯಲಾರರು. ಆದರೆ ಇದರ ನಡುವೆಯೂ ಕೆಲವು ವಿದ್ಯಾವಂತ ಪ್ರಜ್ಞಾವಂತರು ಹಳ್ಳಿಗಾಡಿನಿಂದ ನಗರಕ್ಕೆ ಬಂದು ಪ್ರತಿಯೊಂದಕ್ಕೂ ಪರದಾಡುವುದನ್ನು ನೋಡಿದ್ದೇವೆ. ಸಣ್ಣಪುಟ್ಟದ್ದಕ್ಕೆಲ್ಲ ಸೆನ್ಸಿಟೀವ್ ಆಗಿ ಕೊರಗುವುದನ್ನು ಕಾಣಲು ಸಾಧ್ಯ. ಇತ್ತೀಚೆಗೆ ನನ್ನ ಕವಿಮಿತ್ರನಾದ ಸಿಂಹ ಕೊಳ್ಳೇಗಾಲನನ್ನು ನೋಡಲು ಹೋಗಿದ್ದೆ. ಕಳೆದ ಕೆಲವು ವರ್ಷಗಳಿಂದ ನಾನಾರೀತಿಯ ದೈಹಿಕ ತೊಂದರೆಗಳಿಗೆ ಸಿಕ್ಕಿ ಪರದಾಡುತ್ತಿರುವ ವ್ಯಕ್ತಿ. 'ಕಿಸ್ಮಿ' ಕವನ ಸಂಕಲನ ತರುವ ಸಂದರ್ಭದ ಲವಲವಿಕೆಯನ್ನು ಕಳೆದುಕೊಂಡು ಒಂದು ರೀತಿಯ ವಿಷಾದದ ಮಡುವಿನಲ್ಲಿ ನರಳುತ್ತಿರುವ ಸಿಂಹನನ್ನು ನೋಡಿದಾಗಲೆಲ್ಲ ಹಿಂಸೆಯಾಗುತ್ತೆ. ಈ ಓದು-ಉದ್ಯೋಗವನ್ನು ಮರೆತು ಊರಿನಲ್ಲಿಯೇ ಇದ್ದಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು. ಆರಾಮವಾಗಿ ಆರೋಗ್ಯವನ್ನು ಕಾಪಾಡಿಕೊಂಡು ಬದುಕಬಹುದಾಗಿತ್ತು ಎಂಬ ಮಾತು

ನನ್ನ ಮನಸ್ಸಿನ ತುಂಬ ಆವರಿಸಿತ್ತು. ಕೊನೆಗೆ ಮತ್ತೆ ನೋಡುವೆ ಎಂದು ಹೊರಗೆ ಬಂದು ಬಸ್‌ಸ್ಟಾಪಿನಲ್ಲಿ ನಿಂತಾಗ; ಇಬ್ಬರು ಬ್ರಿಟನ್ನಿನಿಂದ ಬಂದ ಹುಡುಗಿಯರು ಸಿಟಿಮಾರ್ಕೆಟ್ಟಿಗೆ ಹೋಗುವ ಬಸ್ಸು ಯಾವುದೆಂದು ಕೇಳಿದರು. ನಾನು ಆಕಡೆಯೇ ಹೋಗಬೇಕಾಗಿದ್ದುದರಿಂದ, ಬಸ್ಸು ಬಂದಾಗ ತಿಳಿಸುವೆ ಎಂದೆ. ಸುಮಾರು ಕಾಲು ಘಂಟೆಯಾದರೂ ಬಸ್ಸು ಬರಲಿಲ್ಲ. ಇದರ ನಡುವೆ ಅವರ ಪರಿಚಯಮಾಡಿಕೊಳ್ಳಲು ಪ್ರಯತ್ನಿಸಿದೆ. ಅತ್ಯಂತ ಸರಳವಾಗಿದ್ದ ಅವರ ವೃತ್ತಿ; ಪುಸ್ತಕದ ಅಂಗಡಿಯಲ್ಲಿ ಕೆಲಸ. ಈ ಕೆಲಸದಿಂದಲೇ ಪ್ರತಿತಿಂಗಳು ಒಂದಷ್ಟು ಕೂಡಿಟ್ಟು ವಿದೇಶಗಳನ್ನು ನೋಡುವ ಆಸೆಯನ್ನು ಬೆಳೆಸಿಕೊಂಡವರು. ಅವರಲ್ಲಿ ಒಬ್ಬಳ ವಯಸ್ಸು ಬಹಳ ಹೆಚ್ಚೆಂದರೆ ಮುವತ್ತೊರಳಗಿರಬಹುದು. ಮತ್ತೊಬ್ಬಳ ವಯಸ್ಸು ಸುಮಾರು ಇಪ್ಪತ್ತೆರಡಿರಬಹುದು. ಕೊನೆಗೆ ನಾನಾ ರೀತಿಯ ಮಾತುಕತೆಗಳ ನಡುವೆ ಬಸ್ಸು ಬಂತು. ಮೂರುಮಂದಿಯೂ ಮಾರ್ಕೆಟ್ ತಲುಪಿದೆವು. ಅವರೊಡನೆ ಮತ್ತಷ್ಟು ಮಾತಾಡುವ ಆಸೆಯಿದ್ದರೂ ಪ್ರೆಸ್ಸಿಗೆ ಹೋಗಲು ಸಮಯವಾಗಿದ್ದರಿಂದ ಕಳಚಿಕೊಂಡೆ. ಹಾಗೆ ನೋಡಿದರೆ ನಿಜವಾಗಿಯೂ ಕಳಚಿಕೊಳ್ಳುವ ಮನಸ್ಸಿರಲಿಲ್ಲ. ಆದರೆ ಮನಸ್ಸಿನ ಮತ್ತೊಂದು ಮುಖ ಬಿಡುಗಡೆಯಾಗಿದ್ದೇ ಒಳ್ಳೆಯದೆಂಬುದನ್ನು ಸೂಚಿಸುತ್ತಿತ್ತು. ಯಾಕೆಂದರೆ ಬಹಳಷ್ಟು ಬಾರಿ ಈ ಹುಡುಗಿಯರು ಕೆಲವೇ ಕ್ಷಣಗಳಲ್ಲಿ ಎಷ್ಟೋ ವರ್ಷಗಳ ಸಂಬಂಧದಂತೆ ಅಂಟಿಕೊಂಡು ಬಿಡುವುದರಿಂದ ಕೊರಗುತ್ತ ಕೂರಬೇಕಾಗುತ್ತೆ. ಮತ್ತು ಬಿಡುಗಡೆಯ ಭಾವನೆಗಳು ಸರಳಗೊಳ್ಳದೆ ಒದ್ದಾಡುತ್ತಿರುತ್ತೇವೆ. ಹೋಗಲಿ ಇದಕ್ಕಿಂತ ಮುಖ್ಯವಾಗಿ ನನ್ನನ್ನು ಕಾಡಿದ್ದು: ತಮ್ಮ ಜೊತೆಯಲ್ಲಿ ಒಬ್ಬ ಗಂಡಸ್ಸಿಲ್ಲದಿದ್ದರೂ ಮುಕ್ತವಾಗಿ ಸುತ್ತಾಡುವ ಅವರ ಮನೋದಾರ್ಢ್ಯವನ್ನು ಕಂಡು ಮೆಚ್ಚುಗೆಯಾಯಿತು. ಸಾವಿರಾರು ಕಿ.ಮೀಟರ್ ದೂರದಿಂದ ಬಂದು ಎಲ್ಲ ರೀತಿಯ ವಾತಾವರಣವನ್ನು ಎದುರಿಸುವ ಚೈತನ್ಯವನ್ನು ಕಂಡು ಖುಷಿಗೊಂಡೆ.

ಮನುಷ್ಯ ಬದುಕಲು ಪ್ರಕೃತಿಯ ಎಲ್ಲಾ ವಿಕೋಪಗಳನ್ನು ಸವಾಲಾಗಿ ಸ್ವೀಕರಿಸಿ ಹೋರಾಡುವುದರಲ್ಲಿಯೇ ಅವನು ಗಟ್ಟಿಯಾಗುತ್ತ ಹೋಗುತ್ತಾನೆ ಎಂಬುದನ್ನು ಒಪ್ಪಿಕೊಂಡರೂ; ಈ ರೀತಿಯ ಅನಗತ್ಯ ಹೋರಾಟವನ್ನು ಸದಾ ಅವನ ಮುಂದಿಡುವುದು ಎಷ್ಟು ಮಾತ್ರ ಹಿತ ಅನ್ನಿಸುತ್ತೆ. ಯಾಕೆಂದರೆ ಇತ್ತೀಚೆಗೆ ಬೆಂಗಳೂರಿನಲ್ಲಿ ಬಿದ್ದ ವಿಪರೀತ ಮಳೆಯ ಸಂದರ್ಭದಲ್ಲಿ ಒಂದು ತಗ್ಗು ಪ್ರದೇಶಕ್ಕೆ ಹೋದೆ. ಅಲ್ಲಿ ನಗರದ ಕೊಳಕನ್ನೆಲ್ಲ ಹೊತ್ತು ತರುವ ಕಾಲುವೆಯು ತುಂಬ ಅದರ ಕೊಳಕ್ಕೆಲ್ಲ ಮನೆಗಳಿಗೆ ನುಗ್ಗಿ ನಿರ್ಮಾಣ ಮಾಡಿದ ಭೀಕರ ದೃಶ್ಯವನ್ನು ಕಂಡು ಗಾಬರಿಯಾಯಿತು. ಇದು ಮತ್ತೆಮತ್ತೆ ಸಂಭವಿಸುತ್ತಿದ್ದರೂ ಆ ಜನ ಅಲ್ಲಿಯೇ ಇರುತ್ತಾರೆ, ಬಿಡುಗಡೆಯನ್ನು ಮರೆತು ಇರುತ್ತಾರೆ. ಬಿಡುಗಡೆಗಾಗಿ ಅರ್ಪಿಸುವ ಜಹಮಾಲುಗಳೆಲ್ಲ ಹುಸಿಯಾಗುತ್ತ ಹೋಗುವುದನ್ನು ನೋಡುತ್ತಲೇ ಸಾಯುತ್ತಾರೆ.

ಬೆಂಗಳೂರಿನ ಕೊಳಚೆ ಪ್ರದೇಶಗಳಲ್ಲಿರುವ ಅನುಕೂಲತೆಗಳೂ ಸಹ ಇಂದು ನಮ್ಮ ಗ್ರಾಮಾಂತರ ಪ್ರದೇಶಗಳಲ್ಲಿಲ್ಲ. ಮರಳುಗಾಡಿನಂತಿರುವ ಎಷ್ಟೋ ಜಿಲ್ಲೆಗಳಲ್ಲಿ ಒಂದು ಕೊಡನೀರಿಗಾಗಿ ಎಷ್ಟು ದೂರ ಹೋಗಬೇಕು ಅನ್ನಿಸುತ್ತೆ. ಇಂಥದರಲ್ಲಿ ಹೊಟ್ಟೆಗೆ ಅನ್ನವನ್ನು ಗಿಟ್ಟಿಸಿಕೊಳ್ಳುವುದು ಹೇಗೆ ಎಂಬ ಪ್ರಶ್ನೆಯನ್ನು ಶಾಶ್ವತಗೊಳಿಸಿ ಬಿಟ್ಟಿದ್ದೇವೆ.

ಒಂದೆರಡು ತಿಂಗಳಿಂದ ನಂಬಲು ಸಾಧ್ಯವಿಲ್ಲದಂತಹ ಘಟನೆಯನ್ನು ಎರಡು ಮೂರು ಬಾರಿ ಕಂಡು ಆಶ್ಚರ್ಯಗೊಂಡೆ. ಒಂದು ಹಂತದಲ್ಲಿ ಸ್ವಾಭಾವಿಕ ಪರಿಸ್ಥಿತಿಯನ್ನು ತಲುಪಿದ್ದಾರೆಂದುಕೊಂಡರೂ; ಮನಸ್ಸಿಗೆ ಪಿಚ್ಚೆನಿಸಿತು. ಎಷ್ಟೋ ವರ್ಷಗಳಿಂದ ನೋಡಿರುವ ಆ ಹುಡುಗಿ ಬೆಳೆದದ್ದು ನನ್ನ ಹಳ್ಳಿಯಲ್ಲಿ. ಅವಳ ಅಮ್ಮ-ಅಪ್ಪ ಗೊತ್ತು. ಅಮ್ಮ ಹೇಗೆ ಕಷ್ಟದಲ್ಲಿ ಸಿಕ್ಕಿ ಸತ್ತಳು ಎಂಬುದನ್ನು ಪ್ರತ್ಯಕ್ಷವಾಗಿ ಕಂಡಿದ್ದೆ. ಇವೆಲ್ಲ ವೈಪರೀತ್ಯಗಳ ನಡುವೆ ಆ ಮನೆ ನಾಶವಾಯಿತು. ಇದಕ್ಕೆ ಮುಖ್ಯಕಾರಣ: ತಂದೆಯಾದ ವನು ಸದಾ ಸೋಮಾರಿಯಾಗಿದ್ದ ನಾನು ಕಂಡ ಹಾಗೆ. ಕೇವಲ ಬೋಂಡ ಹಾಗೂ ಕಡಲೆಬೀಜ ತಿನ್ನಲು ತನ್ನ ಮನೆಯನ್ನೆಲ್ಲ ಹಾಳು ಮಾಡಿಕೊಂಡ ಎಂಬ ಮಾತನ್ನು ಚಿಕ್ಕಂದಿನಿಂದಲೂ ಕೇಳುತ್ತ ಬಂದಿದ್ದೆ. ಈಗ ಆತನ ಮಗ ಅವರಿವರ ಹೊಲಗದ್ದೆಗಳಿಗೆ ಕೂಲಿಗೆ ಹೋಗುತ್ತಾನೆ. ಇದ್ದ ಇಬ್ಬರು ಹೆಣ್ಣು ಮಕ್ಕಳಲ್ಲಿ ಒಬ್ಬಳಿಗೆ ಹಿಂದೆಯೇ ಮದುವೆಯಾಗಿತ್ತು. ಎರಡನೆಯ ಮಗಳಿಗೆ ಮದುವೆಯಾಗಿರಲಿಲ್ಲ, ಅನ್ನಿಸುತ್ತೆ. ಆ ಹುಡುಗಿ ನಾನಾ ರೀತಿಯಲ್ಲಿ ಮೇಕಪ್ ಮಾಡಿಕೊಂಡು ಬಸ್‌ಸ್ಟಾಪ್‌ಗಳಲ್ಲಿ ಬೆಲೆವೆಣ್ಣಾಗಿ ಸುತ್ತಾಡುವುದನ್ನು ಕಂಡು ಮೌನಿಯಾದೆ. ಆಕೆಗೆ ನನ್ನ ಪರಿಚಯ ಸಿಕ್ಕಿ ತೊಂದರೆ ಅನುಭವಿಸುವುದು ಬೇಡವೆಂದು ಪರಾರಿಯಾದೆ. ಆದರೆ ಅದೇ ಸಮಯಕ್ಕೆ ಈ ಹುಡುಗಿಯನ್ನು ನಿಲ್ಲಿಸಿ ನಾನಾ ರೀತಿಯ ಪ್ರಶ್ನೆಗಳನ್ನೆಲ್ಲ ಕೇಳುವ ಧೈರ್ಯ ಬರಲೇ ಇಲ್ಲ. ಇದಾದನಂತರ ಒಂದು ದಿನ ಊರಿಗೆ ಹೋಗಿ ತೋಟದ ಕಡೆ ಹೋಗುತ್ತಿದ್ದೆ. ಆತ ಅದೇ ಹುಡುಗಿಯ ತಂದೆ ಕಾಲೆಳೆದುಕೊಂಡು ಕಾಲುದಾರಿಯಲ್ಲಿ ಸಾಗಿದ್ದ. ನನ್ನನ್ನು ಕಂಡು ಸೀನಪ್ಪ ಚೆನ್ನಾಗಿದ್ದೀಯಾ? ಎಂದ. ಕೇವಲ ಒಂದು ರೂಪಾಯಿ ಕೇಳಿದ. ಎರಡು ರೂಪಾಯಿ ಕೊಟ್ಟೆ. ದೇವರು ಒಳ್ಳೆಯದು ಮಾಡಲೆಂದು ಆಶಿರ್ವದಿಸಿದ. ತಕ್ಷಣ ನಿನ್ನ ಮಗಳನ್ನು ಕಂಡಿದ್ದೆ ಎಂದು ಹೇಳಲು ಹೋಗಲಿಲ್ಲ. ಹೇಳಿ ಆ ತಂದೆಯ ಮನಸ್ಸನ್ನು ನೋಯಿಸಲು ಪ್ರಯತ್ನಿಸಲಿಲ್ಲ. ಇದೇ ರೀತಿಯಲ್ಲಿ ಆ ಮಗಳೂ ಸಹ ಎಂದಾದರೊಮ್ಮೆ ಊರಿಗೆಹೋಗಿ ಅಪ್ಪನಿಗೆ ತನ್ನ ಸಂಪಾದನೆಯ ನಾಲ್ಕೈದುರೂಪಾಯಿ ಗಳನ್ನು ಕೊಟ್ಟಾಗ; ದೇವರು ಒಳ್ಳೆಯದು ಮಾಡಲಿ ಎಂಬ ಮಾತನ್ನು ಮಾತ್ರ ಹೇಳ ಬಲ್ಲ. ನಿನಗೆ ಮದುವೆ ಮಾಡಲಾಗಲಿಲ್ಲ ನೀನು ಚೆನ್ನಾಗಿ ಬದುಕುವುದನ್ನು ನೋಡ ಲಾಗಲಿಲ್ಲ ಎಂದು ಅಪ್ಪಿಕೊಂಡು ಅಳಲು ಹೋಗದೆ ಇರಬಹುದು. ಯಾಕೆಂದರೆ

ಆ ಘಟ್ಟಗಳನ್ನೆಲ್ಲ ಮೀರಿ ಮುಂದೆ ಹೋಗಿ ನಿಲ್ಲುವವರು; ದಿನಾ ಸಾಯುವ ಬುತ್ತಿಯನ್ನು ಹೊತ್ತು ತಿರುಗುವವರಿಗೆ ದುಃಖ-ವ್ಯಥೆಯೆಂಬುದು ಮಾಮೂಲಿ ವಿಷಯವಾಗಿರುತ್ತೆ.

ಇಂದು ಕಂಡದ್ದು ನಾಳೆಗಿಲ್ಲ. ಅಷ್ಟು ತೀವ್ರವಾಗಿ ಸಮಾಜ ಛಿದ್ರಗೊಳ್ಳುವುದನ್ನು ನಾವು ಕಾಣುತ್ತ ಸಾಗಿದ್ದೇವೆ. ಸುಖದ ಅವಿಭಕ್ತ ಸಮಾಜದಿಂದ ಬಹುದೂರ ಹೋಗುತ್ತಿದ್ದೇವೆ. ನಗರಗಳು ಆಕರ್ಷಕವಾಗಿ ಕಾಣತೊಡಗುತ್ತಿವೆ. ಪಟ್ಟಣಕ್ಕೆ ಬಂದು ಕಾಫೀ ಕುಡಿಯುವುದು, ದೋಸೆ ತಿನ್ನುವುದು, ಬ್ರಾಂದಿ ವಿಸ್ಕಿ ಕುಡಿಯುವುದು ದವಲತ್ತಿನ ವಿಷಯವಾಗಿದೆ. ಬಡತನದ ತುತ್ತತುದಿಯನ್ನು ಮುಟ್ಟಲು ಎಲ್ಲರೂ ಕಾತುರರಾಗಿರುವಂತೆ ಕಾಣುತ್ತಿದೆ. ನಾವು ಕೆಲವು ಮಂದಿ ಹೆಚ್ಚು ಹೆಚ್ಚು ಭಾವು'ರಾಗುತ್ತಿದ್ದೇವೆ. ಇದು ಬತ್ತಿ ಹೋದಾಗ ಆಕಾಶ ಕಳಚಿಬಿದ್ದರೂ ನಿರ್ಲಿಪ್ತರಾಗಿರುವುದನ್ನು ಕಲಿಯುತ್ತೇವೆ. ಆದರೆ ಭಯದ ಸಂಕೇತವೆಂದರೆ 'ಹಿಂಸೆ' ಬಹುರೂಪಿಯಾಗುತ್ತಿರುವುದು. ಇದನ್ನು ಬರೆಯುವ ಸಮಯದಲ್ಲಿ ನನ್ನ ಗೆಳೆಯನ ಕೊಠಡಿಯ ಕೆಳಗಿನ ವೈನ್‌ಷಾಪಿನಲ್ಲಿ ವಿಚಿತ್ರ ಗಲಾಟೆಯಾಗುತ್ತಿದ್ದುದು ಕೇಳಿಸಿತು. ಹೊರಗೆ ಬಂದು ನೋಡಿದರೆ ಮೂರು ಜನ ಆಟೋದಲ್ಲಿ ಬಂದು ಬಾಟಲ್‌ಗಳನ್ನು ಬೀದಿಗೆಸೆಯುತ್ತಿದ್ದರು. ಮತ್ತೊಬ್ಬರು ಒಂದಷ್ಟು ಬಾಟಲ್‌ಗಳನ್ನು ಆಟೋದಲ್ಲಿ ತುಂಬಿಕೊಂಡು ಹೋಗೆಬಿಟ್ಟರು. ಹತ್ತು ನಿಮಿಷದಲ್ಲಿ ನಡೆದ ಬೃಹತ್ ನಾಟಕವನ್ನು ಹೆಂಗಸರು ಮಕ್ಕಳು ಭೀತರಾಗಿ ನೋಡುತ್ತಿದ್ದರು. ವೈನ್‌ಷಾಪಿನ ಹುಡುಗ ತನ್ನ ಕೆಲಸ ಹೋಗುತ್ತೆ ಎಂದು ಅಳುತ್ತಿದ್ದ. ಈ ಹಿಂಸೆಯ ಹಿನ್ನೆಲೆಗೆ ಸಂಬಂಧವಿಲ್ಲದ ಆ ಹುಡುಗ ಅನಾಥನಾಗಿದ್ದ. ಇಂದು ಬೆಂಗಳೂರಿನ ನೂರಾರು ವೈನ್‌ಷಾಪ್‌ಗಳು ನೂರಾರು ಕುಟುಂಬಗಳ ಮಧ್ಯೆ ಇರತಕ್ಕಂತಹವು. ಎಷ್ಟೋ ಕಡೆ ಬೀದಿಯಲ್ಲಿ ಹುಡುಗಿಯರು ಓಡಾಡುವುದಿಲ್ಲ. ಒಂದು ಕಡೆ ಭೀಕರ ಬರವನ್ನು ಎದುರಿಸುತ್ತಿದ್ದರೆ ಮತ್ತೊಂದೆಡೆ ಇಂಥ ಅಮಾನುಷ ಕೃತ್ಯಗಳಿಗೆ ಬೆಂಬಲಿಸುತ್ತಿರುತ್ತೇವೆ. ನಮ್ಮ ಆದರ್ಶ ಸಮಾಜದ ಕಲ್ಪನೆಯಿಂದ ಬಹುದೂರ ಬಂದಿರುವುದರಿಂದ ಭ್ರಷ್ಟತೆಯ ಮುಂದಿನ ಮುಖ ಹಿಂಸೆಯನ್ನು ಅನಿವಾರ್ಯವೆನ್ನುವಂತೆ ಒಪ್ಪಿಕೊಳ್ಳುತ್ತಿದ್ದೇವೆ. ಈ ದೃಷ್ಟಿಯಿಂದ ಬೆಂಗಳೂರಿನ ಬೀದಿಗಳಲ್ಲಿಯ ನೂರಾರು, (ಇಂದು ಬೆಂಗಳೂರಿನಲ್ಲಿಯ ವೇಶ್ಯಾಸ್ತ್ರೀಯರ ಸಂಖ್ಯೆ ಸುಮಾರು ನಲವತ್ತೈದು ಸಾವಿರವನ್ನು ಮೀರಿದೆ) ಹುಡುಗಿಯರು, ಮುದುಕಿಯರು ನಮ್ಮ ದೇಹ ಮಾರಾಟಕ್ಕಿದೆ ಬನ್ನಿ ಎಂದು ಅವರ ನಿರ್ಜೀವ ಕಣ್ಣುಗಳಲ್ಲಿ ಕಾಂತಿಯನ್ನು ತುಂಬಿಕೊಳ್ಳಲು ಪ್ರಯತ್ನಿಸಿದಾಗ; ಮತ್ತೆ ನನ್ನ ಊರಿನ ಆ ಹುಡುಗಿ ಅವಳ ಅಮ್ಮ-ಅಪ್ಪ ಹೊಲ-ಗದ್ದೆಗಳು ಪೈರು-ಪಚ್ಚೆ, ತುಂಬಿ ಹರಿಯುತ್ತಿದ್ದ ಆ ಕೆರೆ ಎಲ್ಲವೂ ನೆನಪಿಗೆ ಬರುತ್ತೆ. ಈ ನೆನಪು ಎಷ್ಟೋ ಬಾರಿ ಊರಿಗೆ ಕರೆದೊಯ್ಯುವ ಧೈರ್ಯವನ್ನು ಬೆಳೆಸುವುದಿಲ್ಲ.

ನಮ್ಮ ವಿದ್ಯೆ ಏನನ್ನೂ ಕೊಡದೆ ಬಂಜೆಯಾಗುತ್ತಿರುವುದರಿಂದ ಸ್ವಲ್ಪಮಟ್ಟಿಗೆ ಓದಬಲ್ಲವರೆಲ್ಲ ಕ್ರೈಮ್ ನ್ಯೂಸ್‌ಗಳಿಗೆ, ಲೈಂಗಿಕತೆಯ ಬಗೆಗಿನ ರೋಚಕ ವಿಷಯಗಳಿಗೆ ಹೆಚ್ಚು ಹೆಚ್ಚು ಮನಸ್ಸನ್ನು ತೆರೆದಿಡುತ್ತಿರುವುದರಿಂದ ಒಟ್ಟು ಅನಾರೋಗ್ಯದ ಮನಸ್ಸು ಮುಕ್ತವಾಗಿ ಬೆಳೆಯುವುದಕ್ಕೆ ಯಾವ ರೀತಿಯ ಅಡ್ಡಿ ಆತಂಕಗಳೂ ಇರುವುದಿಲ್ಲ. ಇದರ ಒಟ್ಟೊಟ್ಟಿಗೆ ಭ್ರಷ್ಟಗೊಳ್ಳುವ ಜನ ಅದರ ಮೂಲಕ ಸಂಪಾದಿಸಿದ ಹಣ ಸದಾ ಅಪರಾಧಿ ಮನೋಭಾವನೆಯನ್ನು ಬೆಳೆಸುತ್ತಲೇ ಹೋಗುತ್ತೆ. ಇಲ್ಲಿ ಬೆಳೆಯುವ ಕುದುರೆ ಜೂಜು, ಇಸ್ಪೀಟು ಮತ್ತು ಮಟ್ಕಾ ಕೇವಲ ಮೋಜಿನ ಆಟಗಳಾಗಿ ಉಳಿದಿರುವುದಿಲ್ಲ. ತನ್ನ ಸುತ್ತಲೂ ದೊಡ್ಡ ದೊಡ್ಡ ಗೂಂಡಾಗಳ ಪಡೆಯನ್ನು ಬೃಹದಾಕಾರದಲ್ಲಿ ಬೆಳೆಸಿಕೊಂಡಿರುತ್ತೆ. ಇದನ್ನು ಬೆಳೆಸುವವರೇ ಒಟ್ಟು ಸಮಾಜವನ್ನು ನಿಯಂತ್ರಿಸುವ ಯಜಮಾನರಾಗಿರುತ್ತಾರೆ. ಎರಡು ಮೂರು ದಿನಗಳ ಹಿಂದೆ ಗೆಳೆಯನಾದ ಉಪೇಂದ್ರ (ಕ್ರಿಯಾಶೀಲ ಹರಿಜನ ಹುಡುಗ)ನ ಜೊತೆಯಲ್ಲಿ ಗಲಭೆಗೊಳಗಾದ ಒಂದು ಹಳ್ಳಿಗೆ ಹೋದೆ. ಅಲ್ಲಿ ಕ್ರೈಸ್ತಮತದವರ ಜನಸಂಖ್ಯೆಯೇ ಸುಮಾರು ಐದಾರು ಸಾವಿರದಷ್ಟಿದೆ. ಹೋಬಳಿ ಕೇಂದ್ರವಾಗಿರುವ ಹಳ್ಳಿ. ಹಿಂದಿನ ಒಂದೆರಡು ದಿನಗಳಲ್ಲಿ ಪೋಲೀಸರ ಬೆತ್ತದ ಬಿಸಿಗೆ ತತ್ತರಿಸಿದ್ದಾರೆ ಕ್ರಿಸ್ತಿಯನ್ನರು ಎಂಬ ಸುದ್ದಿಯನ್ನು ಕೇಳಿದ್ದೆ. ಇದರಿಂದ ಎರಡು ಮತಗಳ ನಡುವಿನ ಸಾಮರಸ್ಯ ಕಡಿದುಬಿದ್ದಿತ್ತು. ಆದರೆ ಇದೆಲ್ಲಕ್ಕಿಂತ ಸ್ವಾರಸ್ಯಕರ ಅಥವಾ ವಿಷಾದದ ಸಂಗತಿಯೆಂದರೆ: ತಮಾಷೆಗೆ ಇಲ್ಲಿ ಬಟ್ಟಿ ಸಾರಾಯಿಯನ್ನಿಳಿಸುವ ಸುಮಾರು ನೂರೈವತ್ತು ಕುಟುಂಬಗಳು ಇರಬಹುದಾ ಎಂದು ಕೇಳಿದೆ. ಒಟ್ಟು ಗಲಭೆಯನ್ನು ವಿವರಿಸುತ್ತಿದ್ದ ವ್ಯಕ್ತಿ (ಮುಖಂಡನಾಗಿದ್ದ) ಯಾವುದೇ ರೀತಿಯ ಸಂಕೋಚವಿಲ್ಲದೆ ಇನ್ನೂ ಸ್ವಲ್ಪ ಜಾಸ್ತಿಯಿರಬಹುದು ಎಂದ. ನಿಜವಾಗಿಯೂ ಒಂದಕ್ಷಣ ಗಾಬರಿಯಾದೆ. ಇದನ್ನು ಒಂದೇ ಒಂದು ಕಾರಣಕ್ಕಾಗಿ ಪ್ರಸ್ತಾಪಿಸಲು ಬಯಸಿದ್ದು; ಇಂದು ನಮ್ಮ ಬಹುಪಾಲು ಹಳ್ಳಿಗಳೆಲ್ಲ ಇಂಥ ಗುಡಿ ಕೈಗಾರಿಕೆಯನ್ನು ರಾಜಾರೋಷವಾಗಿ ಅಪ್ಪಿಕೊಂಡಿದೆ. ಇದರಿಂದಒಟ್ಟು ಕುಟುಂಬ ವ್ಯವಸ್ಥೆ ಹೇಗೆ ಚೂರು ಚೂರಾಗುತ್ತಿದೆ ಅನ್ನಿಸುತ್ತಿದೆ. ಹಿಂದೆ ಹಳ್ಳಿಗಳನ್ನು ನೈತಿಕವಾಗಿ ನಿಯಂತ್ರಿಸುತ್ತಿದ್ದ ಪಟೇಲರನ್ನು, ಗೌಡರನ್ನು ಕಳೆದುಕೊಂಡಿದ್ದೇವೆ. ಅವರ ಜಾಗದಲ್ಲಿ ಪುಡಾರಿಗಳು ಬಹಳ ಹುಲುಸಾಗಿ ಬೆಳೆದಿದ್ದಾರೆ.

15-10-86 —ಶೂದ್ರಶ್ರೀನಿವಾಸ್

ದಯವಿಟ್ಟು ಕ್ಷಮಿಸಿ, ಈ ಬಾರಿಯು ಕನಸುಗೊಂದು ಕಣ್ಣುವಿನಲ್ಲಿ 'ನಾ ಕಂಡ ಉಡುಪಿ'ಯ ಜನರ ಬಗ್ಗೆ ಬರೆಯ ಬೇಕಾಗಿತ್ತು, ಆದರೆ ವಿವಿಧ ಕಾರಣಗಳಿಗಾಗಿ ಮತ್ತೆ ಮತ್ತೆ ನೆನಪು ಮಾಡಿಕೊಳ್ಳಬಹುದಾದನನ್ನ ಪ್ರೀತಿ[illegible] ವ್ಯಕ್ತಿಗಳಾದ ಜಿ.ರಾಜಶೇಖರ್, ಬೋಳವಾರು ಮಹಮದ್ ಕುಂಞ, ಮುರಾರಿ ಬ[illegible] ಮುರಳೀದರ ಉಪಾಧ್ಯಾಯ, ಹರಿದಾಸಭಟ್ಟರು, ವೈದೇಹಿ, ಶರತ್ ಕಲ್ಕೋಡ್[illegible]ಗೂ ಉಡುಪಿಗೆ ಹತ್ತಿರದವರಾದ ನಾರಾಯಣಮೂರ್ತಿ ಮರಕಿಣಿ ವಿವೇಕರೈ, [illegible]ಷೋತ್ತಮ ಬಿಳಿಮಲೆ ಇವರ ಸುತ್ತಲೂ ನೆನಪಿನಾಳದಲ್ಲಿ ಗಾಢವಾಗಿ ಬೇರೂರಿ ಬಿ[illegible]ರುವ ಬಿ.ವಿ. ಕಾರಂತರ ಬಗ್ಗೆ ಹೇಗೆ ಬರೆಯ ಬೇಕೆಂಬುದರ ಪ್ರಾರಂಭದ ಕೊಂಡಿ ಸಿಕ್ಕದೆ ಒದ್ದಾಡುತ್ತಿದ್ದುದರಿಂದ ಬರೆಯಲಾಗಲಿಲ್ಲ. ಹೀಗೆ ಬರೆಯುವಾಗ ಮಲ್ಪೆಯ ಸಮುದ್ರದ ಅಲೆಗಳು ಹೇಗೆ ದಂಡೆಗೆ ಮುತ್ತಿಟ್ಟು ಹೋಗುತ್ತಿದ್ದವು ಎಂಬುದರಿಂದ ಸುರುಮಾಡಬೇಕೆನ್ನಿಸುತ್ತಿತ್ತು. ಹಾಗೆಯೇ ಪುತ್ತೂರಿನ ಶಿವರಾಯಕಾರಂತ, ಸಾಲಿಗ್ರಾಮದ ಶಿವರಾಮಕಾರಂತರನ್ನು ಹೇಗೆ ಅರ್ಥೈಸಬೇಕೆಂಬುದರ ಬಗ್ಗೆ ಗೊಂದಲದಲ್ಲಿರುವುದರಿ[illegible]ವ ಬರೆಯಲಾಗಲಿಲ್ಲ. ಇದಕ್ಕಾಗಿ ವಿಷಾದಿಸುತ್ತೇನೆ, ಹೀಗೆ ಬರೆಯುವಾಗ ಬೆಂಗಳೂರಿನಲ್ಲಿ ಮುದ್ದು ಮುದ್ದಾಗಿ ಓಡಾಡುತ್ತ ಸದಾ ಮುಪ್ಪನ್ನು ಕಾಣದ ವಿಜಯಾರವರು ಮಣಿಪಾಲ್ ಪತ್ರಿಕೋದ್ಯಮದಲ್ಲಿ ನಡೆಸುವ ಕಾರುಬಾರನ್ನು ಕುರಿತುಬರೆಯಬೇಕಾಗಿತ್ತು. ●

## THE TEA SHOP

The girl in the tea shop
        Is not so beautiful as she was,
Th August has worn against her.
She does not get up the stairs so eagerly:
Yes, she also will turn middle aged,
And the glow of youth that she spread about us
        As she brougt us our muffins
Will be spread about us no longer,
    She also will turn middle-aged.

*—Ezra Pound*

(ಇದನ್ನು ಕೆ.ವಿ. ತಿರುಮಲೇಶ್ ಇಷ್ಟಪಟ್ಟು ಕಳಿಸಿದ್ದು)

## ವಿಧಾನ ಸಭೆಯಿಂದ ಗ್ರಾಮ ಸಭೆಗೆ

# ಜಿಲ್ಲಾ ಪರಿಷತ್ ವಿಧೇಯಕ

ರಾಜ್ಯ ಸರ್ಕಾರದ ಜಿಲ್ಲಾ ಪರಿಷತ್ ವಿಧೇಯಕ ರಾಷ್ಟ್ರಪತಿಯವರ ಅಂಗೀಕಾರ ಪಡೆದ ಮೇಲೆ 14-8-85 ರಂದು ಜಾರಿಗೆ ಬಂದಿತು. ಸಮಗ್ರ ಭಾರತದಲ್ಲಿಯೇ ಕೈಗೊಂಡಿರುವ ಅಧಿಕಾರ ವಿಕೇಂದ್ರೀಕರಣ ಜಿಲ್ಲಾ ಪರಿಷತ್ ವಿಧೇಯಕ ಒಂದು ದಿಟ್ಟ ಕಾರ್ಯಕ್ರಮ. ರಾಜ್ಯದ ಸರ್ವತೋಮುಖ ಏಳಿಗೆಗೆ ಗ್ರಾಮ ರಾಜ್ಯದಿಂದ ರಾಮ ರಾಜ್ಯವನ್ನು ಕಟ್ಟುವ ಯತ್ನವಿದು. ಇನ್ನು ಆಡಳಿತ ವಿಧಾನಸೌಧದಿಂದಲ್ಲ. ಅದು ಗ್ರಾಮದಿಂದ ಆಗಬೇಕು. ಬಡತನ ನಿರ್ಮೂಲನಾ ಕ್ರಮ, ಅಭಿವೃದ್ಧಿ ಕಾರ್ಯಕ್ರಮಗಳ ಕೆಲಸ ಹೇಗೆ ನಡೆಯಬೇಕೆಂಬ ಎಲ್ಲ ನಿರ್ಣಯ ಹಾಗೂ ಕಾರ್ಯ ನಿರ್ವಹಣೆ ನಿಮ್ಮಿಂದ. ನೀವು ಸರ್ಕಾರದ ಬಳಿ ಹೋಗಬೇಕಿಲ್ಲ. ಸರ್ಕಾರವೇ ನಿಮ್ಮ ಹತ್ತಿರ ಬಂದು ಕಾರ್ಯ ನಿರ್ವಹಣೆ, ಮತ್ತು ಅಭಿವೃದ್ಧಿಯನ್ನು ವೀಕ್ಷಿಸುವುದು.

ಗ್ರಾಮ ಸಭೆಯನ್ನೇ ಈ ವ್ಯವಸ್ಥೆಯ ಮೂಲ ಘಟಕವನ್ನಾಗಿ ಪರಿಗಣಿಸಲಾಗುತ್ತದೆ. ಅಲ್ಲದೆ ಮಂಡಲ ಪಂಚಾಯಿತಿಗಳ ಒಕ್ಕೂಟವೇ ಕೇಂದ್ರ ವ್ಯವಸ್ಥೆಯಾಗುವುದು

ಅಂಗರಚನೆ : 1. ಎಲ್ಲ ಮತದಾರರು ಆ ಗ್ರಾಮದ ಗ್ರಾಮ ಸಭೆಯ ಸದಸ್ಯರಾಗಿರುವರು. ಅಲ್ಲದೆ. ಜಿಲ್ಲಾ ಪರಿಷತ್ತಿಗೆ ನಡೆಯುವ ಚುನಾವಣೆಯಲ್ಲಿ ಮತದಾನದ ಹಕ್ಕನ್ನು ಪಡೆದಿರುತ್ತಾರೆ. 2. ಪ್ರತಿ 400 ಗ್ರಾಮಸದಸ್ಯರಿಗೆ ಒಬ್ಬರಂತೆ ಮಂಡಲ ಪಂಚಾಯಿತಿಗೆ ಒಬ್ಬ ಸದಸ್ಯನನ್ನು ಚುನಾಯಿಸುವರು. 3. ಎಲ್ಲಾ ತಾಲ್ಲೂಕಿನಿಂದ ಪ್ರತಿ 28,000 ಜನಸಂಖ್ಯೆಗೆ ಮತ್ತು ಕೊಡಗು ಜಿಲ್ಲೆಯಲ್ಲಿ ಪ್ರತಿ 12,000 ಜನಸಂಖ್ಯೆಗೆ ಒಬ್ಬರಂತೆ ಜಿಲ್ಲಾ ಪರಿಷತ್ತಿಗೆ ಒಬ್ಬ ಸದಸ್ಯನನ್ನು ಚುನಾಯಿಸುವರು. 4. ಮಂಡಲ ಪಂಚಾಯಿತಿಯಲ್ಲಿ ಕೂಡ ದುರ್ಬಲ ಮತ್ತು ಅನುಸೂಚಿತ ಜಾತಿ ಪಂಗಡಗಳಿಗೆ ಮತ್ತು ಮಹಿಳೆಯರಿಗೆ ಮೀಸಲಾತಿ ಉಂಟು. (ತಾಲ್ಲೂಕಿಗೆ ಒಬ್ಬರಂತೆಯಾದರೂ ಮಹಿಳಾ ಸದಸ್ಯರು ಇರುವರು) 5. ಚುನಾಯಿಸಲ್ಪಟ್ಟ ಸದಸ್ಯರಲ್ಲದೆ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನ ಅಧ್ಯಕ್ಷ ಜಿಲ್ಲೆಯ ಶಾಸಕರು ಜಿಲ್ಲಾ ಪರಿಷತ್ತಿನ ಸದಸ್ಯರಾಗಿರುವರು. 6. 18 ವರ್ಷ ವಯಸ್ಸಿನ ಪ್ರತಿಯೊಬ್ಬ ಗ್ರಾಮನಿವಾಸಿಗೆ ಮತದಾನದ ಹಕ್ಕು ಇರುತ್ತದೆ. ಚುನಾವಣೆಗೆ ಅಭ್ಯರ್ಥಿಯಾಗಿ ನಿಲ್ಲುವವರಿಗೆ 25 ವರ್ಷ ತುಂಬಿರಬೇಕು. 7. ಜನರಿಂದ ನೇರವಾಗಿ ಚುನಾಯಿತರಾದ ಸದಸ್ಯರು ಮಾತ್ರ ಅಧ್ಯಕ್ಷ ಹಾಗೂ ಉಪಾಧ್ಯಕ್ಷರಾಗಿ ಆಯ್ಕೆಯಾಗಬಲ್ಲರು.

**ಕರ್ನಾಟಕ ವಾರ್ತೆ**

ಅಭಿವೃದ್ಧಿಯ ಅಧಿಕಾರ ನಿಮ್ಮದು.

F/NP/KRNU/72

No. M (2) PRB 210/73/74

Shoodra Kannada Monthly



ಮುಂದಿನ ಸಂಚಿಕೆಯಲ್ಲಿ :

ಕೆ. ವಿ. ತಿರುಮಲೇಶ್

ರಾಮಚಂದ್ರ ಪೈ

ಎ. ಆರ್. ನಾಗಭೂಷಣ

ಪಂಡಿತಾರಾಧ್ಯ ಶಿವಾಚಾರ್ಯಸ್ವಾಮಿ

ಓ. ಎಲ್. ನಾಗಭೂಷಣಸ್ವಾಮಿ

ಕೆ. ವಿ. ಸುಬ್ಬಣ್ಣ

ಟಿ. ಪಿ. ಅಶೋಕ್

ಮಮತಾ ಸಾಗರ್

ಎಚ್. ಎಸ್. ಆರತಿ

ಪ್ರೇಮ ಸಿರ್ಸೆ

ನಾಗರತ್ನಕುಮಾರಿ

ರಮಜಾನ್ ದರ್ಗಾ

ಪ್ರೇಮಲೀಲಾ

ಸುದ್ದಿಯ ಗುದ್ದಾಟ

ಕನಸಿಗೊಂದು ಕಣ್ಣು

ಪುಸ್ತಕ ವಿಮರ್ಶೆ

Printed at : Shalivahan Printers, Bangalore-53

Editor & Publisher : M. SRINIVAS